ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವದು.

ಬೆಲೆ: ಎರಡು ಆಣೆ

# ಕರ್ಮವೀರ

KARMAVEER
WEEKLY
HUBLI
JUNE 17
1946

ಸಂಪಾದಕರು :
ರಾ. ಪುರೋಹಿತ, ಎಂ. ಎ. ]

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

[ Editor : H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೧೭ — ೬ — ೧೯೪೬ [ ಸಂಚಿಕೆ ೧೧

# ಪಾಲಿಸ್ತಾನದಲ್ಲಿ 'ವೃತ್ತವನ್ನು ಚೌಕಾಗಿ ಮಾಡುವ ಆಟ'

## ಸಿಡಿಮದ್ದಿನ ಆವಿಷ್ಕಾರಕ್ಕೆ ಒಂದು ದೇಶವನ್ನು ನೀಡಿದ ಕತೆ: ಪಾಲಿಸ್ತಾನದಲ್ಲಿ ನಡೆದಿರುವ ಎಳೆದಾಟದ ಶಕ್ತಿಗಳಾವವು

ಪಾಲಿಸ್ತಾನದ ಸಮಸ್ಯೆ ಇದೀಗ ಒಂದು ಬಗೆಯ ಸಿಡಿಮದ್ದಿನಂಥ ಸ್ವರೂಪವನ್ನು ತಳೆದಿದೆ. ೩೦ ವರ್ಷಗಳ ಹಿಂದೆ, ೧೯೧೭ ರಲ್ಲಿ ಈ ಸಮಸ್ಯೆಯ ಬೀಜವನ್ನು ಬ್ರಿಟಿಶರು ಬಿತ್ತಿದಾಗ ಅದರ ಮೂಲದಲ್ಲಿ ನಿಜಕ್ಕೂ ಸಿಡಿಮದ್ದೇ ಇತ್ತು. ಅದೀಗ ವಿಚಿತ್ರ ಐತಿಹಾಸಿಕ ಸಂಯೋಗಗಳಲ್ಲೊಂದು.

ಯುದ್ಧ ಬಹಳ ಭರದಿಂದ ಸಾಗಿತ್ತು. ಮಿತ್ರರ ಪರಿಸ್ಥಿತಿ ಅಷ್ಟೇನೂ ನಿಶ್ಚಿಂತವಾಗಿರಲಿಲ್ಲ. ಅಂಥ ಪರಿಸ್ಥಿತಿಯಲ್ಲಿ ಯಹೂದ್ಯ ವೈಜ್ಞಾನಿಕನೊಬ್ಬನು ಹೊಸ ಬಗೆಯ ಸಿಡಿಮದ್ದನ್ನು ಗೊತ್ತು ಹಚ್ಚಿದ್ದನು. ಮಿತ್ರರ ಕೈಯಲ್ಲಿ ಈ ಹೊಸ ಆವಿಷ್ಕಾರ ಬಿದ್ದರೆ ಅದರಿಂದ ಯುದ್ಧ ಗೆದೆಯುವದಕ್ಕೆ ಬಹಳ ಅನುಕೂಲವಾಗುತ್ತಿತ್ತು. ಆ ಯಹೂದ್ಯ ವೈಜ್ಞಾನಿಕ ಅದನ್ನು ಬ್ರಿಟಿಶರಿಗೆ ದಾನ ಮಾಡಿಯೂ ಮಾಡಿದ. ಆದರೆ ಇದಕ್ಕೆ ಪ್ರತಿಫಲವಾಗಿ ಅವನು ಏನನ್ನೂ ತೆಗೆದುಕೊಳ್ಳಲೊಲ್ಲದಾದ–ಹಣ, ಪದವಿ, ಬಿರುದು–ಯಾವುದನ್ನೂ. ಆದರೆ ಪಾಲಿಸ್ತಾನವನ್ನು "ಯಹೂದ್ಯರ ರಾಷ್ಟ್ರೀಯ ಮಾತೃಭೂಮಿ" ಯಾಗಿ ಮಾಡಬೇಕೆಂಬುದು ಅವನ ಆಶೆಯಾಗಿತ್ತು....ಹೀಗೆ ಇದು ಸಿಡಿಮದ್ದಿನಿಂದ ಪ್ರಾರಂಭವಾಯಿತು.

### ಝಿಯನಿಸ್ಟ ಚಳವಳಿ

ಪಾಲಿಸ್ತಾನವನ್ನು ಯಹೂದ್ಯ ರಾಷ್ಟ್ರೀಯ ಮಾತೃಭೂಮಿಯಾಗಿ ಮಾಡಬೇಕೆಂಬ ಚಳವಳಿಗೆ "ಝಿಯನಿಸ್ಟ" ಚಳವಳಿಯೆಂದು ಹೆಸರು. ೧೮೯೭ ರಲ್ಲಿ ಇದು ಪ್ರಾರಂಭವಾಯಿತು. ಅದಕ್ಕೆ ಜಗತ್ತಿನ ಯಹೂದ್ಯ ಶ್ರೀಮಂತರ ಧನಶಕ್ತಿಯ ಬೆಂಬಲವಿತ್ತು. ೧೭ ಶತಮಾನಗಳಿಂದ ತಮ್ಮ ಪವಿತ್ರ ಭೂಮಿಯಿಂದ ಭ್ರಷ್ಟರಾಗಿ ಪುನಃ ತಮ್ಮ ಎಲ್ಲ ಪಾಡಿವಂತಿಕೆ, ಎಲ್ಲ ಪ್ರಾಚೀನ ವೈಭವ, ತಮ್ಮದೇ ಹಿಬ್ರು ಭಾಷೆ, ಧರ್ಮಗಳ ಅಭ್ಯುದಯದಲ್ಲಿ ಬಾಳಬೇಕೆಂಬ ಕನಸು ಕಾಣುತ್ತಿದ್ದ ಯಹೂದ್ಯರ ಹೃದಯಗಳ ಬೆಂಬಲವಿತ್ತು. ರೋಮನ್ ಸಾಮ್ರಾಜ್ಯದ ದಂಡುಗಳು ಅವರನ್ನು ಪವಿತ್ರ ಭೂಮಿಯಿಂದ ಉಚ್ಚಾಟನೆ ಮಾಡಿದಂದಿನಿಂದ ಜಗತ್ತಿನಲ್ಲೆಲ್ಲ ಗತಿವಿಹೀನರಾಗಿ ಅಲೆಯುತಿದ್ದವರು ಯಹೂದ್ಯರು. ಏಳನೆ ಶತಮಾನದಿಂದ ಜರುಸಲೇಮು—ಪಾಲಿಸ್ತಾನದ ರಾಜಧಾನಿ—ಮುಸ್ಲಿಮರ ಆಳಿಕೆಗೊಳಪಟ್ಟಿತ್ತು. ಅರಬರು ಬಹಳ ಪಾಲಿಸ್ತಾನದಲ್ಲಿ ನೆಲಸಿದ್ದರು. ೧೬ ನೆ ಶತಮಾನದಿಂದ ಕಳೆದ ಯುದ್ಧದ ವರೆಗೆ ಅದು ತುರ್ಕರ ಕೈಯಲ್ಲಿತ್ತು.

### ಪಾಲಿಸ್ತಾನ ಘೋಷಣೆ

ತುರ್ಕರು ಬ್ರಿಟಿಶರ ಶತ್ರುಗಳ ಪಕ್ಷದಲ್ಲಿ ಸೇರಿಸಿದ್ದರು. ಅವರ ಕೈಯಲ್ಲಿದ್ದ ಪಾಲಿಸ್ತಾನದಲ್ಲಿ ತಮ್ಮ ಗತವೈಭವವನ್ನು ಸ್ಥಾಪಿಸಲು ಝಿಯನಿಸ್ಟರು ಕೈಹಿಸುಕಿಕೊಳ್ಳುತ್ತಿದ್ದರು. ಅವರ ಕೈಲಿ ಹಣವಿತ್ತು. ಅವರಿಗೆ ಅಮೇರಿಕೆಯಲ್ಲಿ ಬಹಳಷ್ಟು ವರ್ಚಸ್ಸೂ ಇತ್ತು. ಏಕೆ, ಬ್ರಿಟಿಶ ಮಂತ್ರಿಮಂಡಲದಲ್ಲಿಯೇ ಯಹೂದ್ಯ ಕುಲದ ಮಂತ್ರಿಗಳಿದ್ದರು. ಪಾಲಿಸ್ತಾನವನ್ನು ಯಹೂದ್ಯ "ರಾಷ್ಟ್ರೀಯ ಮಾತೃಭೂಮಿ"ಯನ್ನಾಗಿ ಮಾಡಿದರೆ ಅವರೆಲ್ಲರ ಧನ, ವರ್ಚಸ್ಸುಗಳ ಪ್ರಯೋಜನ ಬ್ರಿಟಿಶ ಕಾರಣಕ್ಕೆ ದೊರೆಯುವ ಆಶೆಯಿತ್ತು. ಪಾಲಿಸ್ತಾನದಲ್ಲಿ ಹದಿನಾಲ್ಕು ಶತಮಾನಕ್ಕಿಂತ ಹೆಚ್ಚು ಕಾಲ ವಸತಿ ಮಾಡಿದ್ದ ಅರಬರ ಮಟ್ಟಿಗೆ ಹೇಳಬೇಕಾದರೆ ಅವರು ತುರ್ಕರ ನೊಗದಿಂದ ಪಾರಾಗಿ ಹೊರಬರುವ ಆತುರದಲ್ಲಿದ್ದರು. ಇಂಥ ಸ್ಥಿತಿಯಲ್ಲಿ ಆಗಿನ ವಿದೇಶಮಂತ್ರಿ ಲಾರ್ಡ ಬಾಲಫೋರರು ನವಂಬರ ೨, ೧೯೧೭ ನೆದಿನ ತಮ್ಮ ಪ್ರಸಿದ್ಧ ಪಾಲಿಸ್ತಾನ ಘೋಷಣೆಯನ್ನು ಮಾಡಿದರು.

> "ಪಾಲಿಸ್ತಾನದಲ್ಲಿ ಯಹೂದ್ಯ ಜನರ ರಾಷ್ಟ್ರೀಯ ಮಾತೃಭೂಮಿಯನ್ನು ಸ್ಥಾಪಿಸುವದಕ್ಕೆ ಬ್ರಿಟಿಶ ಸರಕಾರ ಬೆಂಬಲ ಕೊಡುತ್ತದೆ ಮತ್ತು ಈ ಉದ್ದೇಶವನ್ನು ಸಾಧಿಸಲು ಸಮಸ್ತ ಪ್ರಯತ್ನವನ್ನೂ ಮಾಡುವದು. ಆದರೆ ಈಗ ಪಾಲಿಸ್ತಾನದಲ್ಲಿ ವಾಸಿಸುತ್ತಿರುವ ಯಹೂದ್ಯೇತರ ಜನರ ನಾಗರಿಕ ಮತ್ತು ಧಾರ್ಮಿಕ ಹಕ್ಕುಗಳಿಗೆ ಧಕ್ಕೆ ತಗಲುವಂತಹದೇನನ್ನೂ ಮಾಡಲಾಗದೆಂದು ಸ್ಪಷ್ಟವಾಗಿ ಅರಿತುಕೊಳ್ಳಬೇಕು. ಅಂತೆಯೇ ಬೇರೆ ಯಾವದೇ ದೇಶದಲ್ಲಿ ಯಹೂದ್ಯರಿಗೆ ಇರುವ ಹಕ್ಕುಗಳಿಗಾಗಲಿ ಧಾರ್ಮಿಕ ಸ್ಥಾನಮಾನಗಳಿಗಾಗಲಿ ಇದರಿಂದ ವ್ಯತ್ಯಯವುಂಟಾಗುವಂತಿರಕೂಡದು."

—ಇದು ಆ ಘೋಷಣೆಯ ಅರ್ಥವಾಗಿತ್ತು.

ತುರ್ಕರ ಶಕ್ತಿಯ ಆಯುಷ್ಯ ಮುಗಿದಿತ್ತು. ಬ್ರಿಟಿಶ ಸೇನಾಪತಿ ಜನರಲ್ (ಲಾರ್ಡ) ಅಲೆನ್‌ಬಿಯವರು ಪಾಲಿಸ್ತಾನದ ಮೇಲೆ ಏರಿಹೋದರು. ಅದು ಅವರ ಮುಂದೆ ಇಸ್ಪೀಟಿನ ಮನೆಯಂತೆ ಉದುರಿತು. ಡಿಸೆಂಬರ ೯, ೧೯೧೭ ಕ್ಕೆ ರಾಜಧಾನಿ ಜರುಸಲೇಂ ಶರಣಾಗತವಾಯಿತು. ಎಲ್ಲವೂ ಸುಖಮಯವಾಯಿತು. ಅರಬರು ತುರ್ಕರಿಂದ ಮುಕ್ತರಾದರು. ಯಹೂದ್ಯರಿಗೆ ತಮ್ಮ "ರಾಷ್ಟ್ರೀಯ ಮಾತೃಭೂಮಿ"ಯ ಭರವಸೆ ದೊರೆತಂತಾಯಿತು.

### ತಂಟೆಯ ಪ್ರಾರಂಭ

ಬಾಲಫೋರ ಘೋಷಣೆಯಂತೆ ಕೆಲಕಾಲ ಎಲ್ಲವೂ ಸುಸೂತ್ರವಾಗಿ ಸಾಗಿತು. ಎರಡೂ ಪಕ್ಷಗಳು ಘೋಷಣೆಗೆ ತಮ್ಮದೇ ಅರ್ಥವನ್ನು ಹಚ್ಚಿಕೊಂಡಿದ್ದವು. "ಯಹೂದ್ಯ ರಾಷ್ಟ್ರೀಯ ಮಾತೃಭೂಮಿ" ಯೆಂದರೇನು? ಅದರ ರಾಜಕೀಯ ಸ್ಥಾನಮಾನವೇನು? ರಾಷ್ಟ್ರೀಯ ಮಾತೃಭೂಮಿಯೆಂದರೆ ರಾಷ್ಟ್ರೀಯ ರಾಜ್ಯ (ಅಥವಾ ಸರಕಾರ) ವೆ? ಹಾಗೆಯೇ ಎಂದು ಝಿಯನಿಸ್ಟರು ತಿಳಿದುಕೊಂಡಿದ್ದರು. ಸ್ವಾಭಾವಿಕವಾಗಿ, ಶಾಶ್ವತವಾದ ಬ್ರಿಟಿಶ ಆಳಿಕೆಯ ಕೆಳಗೆ "ರಾಷ್ಟ್ರೀಯ ಮಾತೃಭೂಮಿ" ಯನ್ನು ಉಳಿಸಬೇಕೆಂದು ಅವರು ಆಶಿಸಿರಲಾರರು. ತಮ್ಮ ಹೀಬ್ರೂ ಭಾಷೆಯೇ ರಾಜಭಾಷೆಯಾದ, ಯಹೂದ್ಯ ಧರ್ಮದ, ರಾಷ್ಟ್ರೀಯ ರಾಜ್ಯವನ್ನು ಸ್ಥಾಪಿಸುವದನ್ನೇ ಅವರು ಆಶಯವಾಗಿಟ್ಟುಕೊಂಡಿದ್ದರು ಮತ್ತು ಆ ಅಭಿಪ್ರಾಯದಿಂದಲೇ ಅವರು ಮುಂದೆ ಸಾಗಿದರು. ಝಿಯನಿಸ್ಟ ಸಮಿತಿ, ಪಾಲಿಸ್ತಾನಕ್ಕೆ ವಲಸೆ ಹೋಗುವ ಯಹೂದ್ಯರಿಗೆ ಅದಷ್ಟು ಮಟ್ಟಿಗೆ ಅಲ್ಲಿ ಎಲ್ಲ ವ್ಯವಹಾರದಲ್ಲಿಯೂ ಹಿಬ್ರುವನ್ನೇ ಬಳಸಬೇಕೆಂದು ಆದೇಶವಿತ್ತಿತು. ೧೯೨೫ ರಲ್ಲಿ ಜರುಸಲೇಮದಲ್ಲಿ ಹಿಬ್ರೂ ವಿಶ್ವವಿದ್ಯಾಲಯ ಸ್ಥಾಪನೆಯಾಯಿತು. ಅದರ ಪ್ರಾರಂಭೋತ್ಸವಕ್ಕೆ ಬ್ರಿಟಿಶ ಸೇನಾಪತಿ ಹಾಜರಿದ್ದನು. ಪಾಲಿಸ್ತಾನದ ವಿಜೇತರಾದ ಬ್ರಿಟಿಶರಿಗೇ ಅದರ ಆಡಳಿತದ ಅದಿಷ್ಟ ಅಧಿಕಾರ ಅಥವಾ ಮ್ಯಾಂಡೇಟ ದೊರಕಿದ್ದಿತು. ಇದರಲ್ಲಿ ಯಹೂದ್ಯರ ಪ್ರಭಾವದ ಬೆಂಬಲ ಬ್ರಿಟಿಶರಿಗೆ ಶಾಂತಿಪರಿಷತ್ತಿನಲ್ಲಿ ಬಹಳ ಉಪಕಾರ ಮಾಡಿತು. ತತ್ಕಾಲಕ್ಕೆ ಯಹೂದ್ಯರ ಆಶೋದಯವೆಲ್ಲ ಫಲಿಸಿದಂತೆ ತೋರಿತು.

ಆದರೆ ಇದು ಬಹಳ ಕಾಲ ತಾಳಲಿಲ್ಲ. ಯಹೂದ್ಯರ ಈ ಮುನ್ನಡೆಯಿಂದ ಅರಬರು ಒಳಗಿಂದೊಳಗೇ ಸಂಶಯಗ್ರಸ್ತರಾಗತೊಡಗಿದ್ದರು. ಘೋಷಣೆಯ ಎರಡನೆಯ ಭಾಗವೇನೋ ಅವರ ಭಯಗಳ ನಿವಾರಣೆಗಾಗಿಯೆ ಉದ್ದೇಶಿಸಲ್ಪಟ್ಟಿತ್ತು. ಆದರೆ ತಮ್ಮದೇ ಆದ ದೇಶದಲ್ಲಿ ೧೪ ಶತಮಾನಗಳಿಂದ ತಾವು ಬಾಳುತ್ತ ಬಂದ ನಾಡಿನಲ್ಲಿ ತಮ್ಮ ಸ್ಥಾನಮಾನವೇನು? ತಮ್ಮ "ನಾಗರಿಕ ಮತ್ತು ಧಾರ್ಮಿಕ ಹಕ್ಕು"ಗಳಿಗೆ ಧಕ್ಕೆ ಬರಬಾರದೆಂದು ಘೋಷಣೆ ಹೇಳುತ್ತಿತ್ತು. ಆದರೆ "ನಾಗರಿಕ" ದಲ್ಲಿ "ರಾಜಕೀಯ" ಹಕ್ಕು ಸೇರಿತ್ತೆ? ತಮ್ಮ ನಾಡಿನಲ್ಲೆ ತಮಗೆ ರಾಜಕೀಯ ಹಕ್ಕು ಇಲ್ಲವೆ? ಯಹೂದ್ಯರ ಭಾಷೆ ಸಂಸ್ಕೃತಿಗಳು ಅವರ ಹಣ ವರ್ಚಸ್ಸುಗಳ ಬಲದಿಂದ ಮುನ್ನುಗ್ಗುತಿರುವಾಗ ತಮ್ಮದು ಬಾಳುವದು ಸಾಧ್ಯವುಂಟೆ? ಈ ಹೊಸಬರು ವರ್ಷೇ ವರ್ಷೇ ಪಾಲಿಸ್ತಾನದಲ್ಲಿ ಬಂದು ವಸತಿ ಮಾಡುತಿರುವರು. ಇವರ ಬರವಿಗೆ ಒಂದು ಇತಿಮಿತಿಯುಂಟೆ ಇಲ್ಲವೆ? ಕಾಲಾಂತರದಲ್ಲಿ ಪಾಲಿಸ್ತಾನ ಅರಬರು ತಮ್ಮ ತಾತ ಮುತ್ತಾತಂದಿರ ನಾಡಿನಲ್ಲಿ ತಾವೇ ಅಲ್ಪಸಂಖ್ಯಾಕರಾಗಿ ಬಿಡುವ ಸಂಭವವಿಲ್ಲವೆ? ಎಂಬ ಉತ್ತರವಿಲ್ಲದ ಪ್ರಶ್ನೆಗಳು ಆರಂಭದಿಂದಲೇ ಅವರ ಮನಸ್ಸನ್ನು ವ್ಯಸ್ತವಾಗಿ ಮಾಡಿದ್ದವು.

### ಸಮೃದ್ಧಿಯ ಆಗಮನ

ನಿಜ. ಯಹೂದ್ಯ ವಲಸೆಗಾರರ ಜೋಡಿ ಪಾಲಿಸ್ತಾನಕ್ಕೆ ಎಂದೂ ಕಾಣದ ಸಮೃದ್ಧಿ ಹರಿದು ಬಂದಿತ್ತು. ಅವರು ತಮ್ಮೊಡನೆ ಅಸಂಖ್ಯ ದ್ರವ್ಯವನ್ನು ತಂದರು. ಕುಶಲ, ಸಮರ್ಥ, ಉದ್ಯಮಶೀಲ ಜನರು ಯಹೂದ್ಯರು. ಅವರು ಪಾಲಿಸ್ತಾನದಲ್ಲಿ ವ್ಯಾಪಾರ–ಉದ್ಯೋಗಗಳನ್ನು ಬೆಳೆಸಿದರು. ಕೃಷಿಯನ್ನು ಸುಧಾರಿಸಿದರು. ನೂತನ ಪದ್ಧತಿಯ ಜೀವನವನ್ನು ಆರಂಭಿಸಿದರು. ಪಾಲಿಸ್ತಾನವನ್ನು ಅವರ ಮಾತೃಭೂಮಿಯಾಗಿ ಮಾಡುವ ವಾಗ್ದಾನವನ್ನು ಅನುಸರಿಸಿ ಅವರಿಗೆ ಭೂಮಿಯನ್ನು ಕೊಳ್ಳುವ ಅಧಿಕಾರ ಕೊಡುವದಾಯಿತು. ಅವರು ಕೊಳ್ಳತೊಡಗಿದರು. ಬೆಲೆಗಳು ಏರಿದವು. ಅರಬರು ಮತ್ತೂ ಮಾರಿದರು. ಅನೇಕ ಜಮೀನುದಾರರು ಲಕ್ಷಾಂತರ ಪಡೆದರು. ಚಿಕ್ಕ ಭೂಮಾಲಕರೂ ಹೊಳೆಹೊಳೆಯುವ ಚಿನ್ನಕ್ಕೆ ಮಾರುವೋಗಿ ತಮ್ಮ ಭೂಮಿ ಕಾಣಿಯನ್ನು ಮಾರಿಕೊಂಡರು. ಯಹೂದ್ಯರು ಭೂಮಿಯನ್ನು ಸುಧಾರಿಸಿದರು. ಸಮೃದ್ಧವಾಗಿ ಮಾಡಿದರು. ಒಟ್ಟಿನ ಮೇಲೆ ಯಹೂದ್ಯರ ಆಗಮನದಿಂದ ಪ್ರಾಚೀನ ಕಾಲದಿಂದ ಹಿಂದುಳಿದುಕೊಂಡಿದ್ದ ಈ ಭೂಭಾಗದಲ್ಲಿ ಹೊಸ ಆರ್ಥಿಕ ಚೈತನ್ಯ ಉದ್ಭವಿಸಿದಂತೆ ತೋರಿತು.

ಆದರೆ ಈ ಹುರುಪಿನ ಆಯುಷ್ಯ ಅಷ್ಟು ದೀರ್ಘವಾಗಿರಲಿಲ್ಲ. ಹೊಳೆಯುವ ಚಿನ್ನ ಸರಳ ಅರಬನ ಕೈಯಲ್ಲಿ ಮಂಜುಗಡ್ಡೆಯಂತೆ ಬಹಳ ಬೇಗ ಕರಗಿ ಹೋಗುತಿತ್ತು. ಸ್ವತಂತ್ರ ಅರಬ ರೈತನು ಭೂಮಿಯನ್ನು ಕಳೆದುಕೊಂಡು ಭೂಮಿಯಿಲ್ಲದೆ ಆಳಾಗಿ ದುಡಿಯುವ ಕಾಲ ಬೇಗನೆ ಬಂತು. ಇದು ಯಹೂದ್ಯರ ವಿಷಯದಲ್ಲಿ—ಪ್ರಾಯಶಃ ಅನ್ಯಾಯವಾಗಿ—ಅರಬನ ಸಂತಾಪವನ್ನು ಹೆಚ್ಚಿಸಿತು. ಯಹೂದ್ಯನ ಆರ್ಥಿಕ ಶಕ್ತಿಯ ಮುಂದೆ ಬಡ ಅರಬನ ಸ್ವಾತಂತ್ರ್ಯ ನಿಲ್ಲಲಾರದೆ ಹೋಯಿತು. ಈ ಸಂಗತಿ ಪಾಲಿಸ್ತಾನದ ಅರಬರಲ್ಲಿ ಮಾತ್ರವಲ್ಲ, ನೆರೆಹೊರೆಯ ಅರಬ ರಾಷ್ಟ್ರಗಳಲ್ಲಿ ಕೂಡ ವಿರೋಧವನ್ನು ಎಬ್ಬಿಸಿತು. ಅರಬರು ಎಚ್ಚತ್ತು ಯಹೂದ್ಯರ ವಲಸೆಯ ವಿರುದ್ಧ ಚಳವಳಿ ಹೂಡತೊಡಗಿದರು.

### ಯಹೂದ್ಯರಿಗೂ ಸಂತೋಷವಾಗಲಿಲ್ಲ

ಅತ್ತ ಯಹೂದ್ಯರಾದರೂ ಬಯಸಿದಷ್ಟು ಸುಖಿಗಳಾಗಲಿಲ್ಲ. ಅವರ ಕನಸಿನ ಯಹೂದ್ಯ ಮಾತೃಭೂಮಿಯಾಗಿ ಪಾಲಿಸ್ತಾನವನ್ನು ಕಾಣುವ ದಿನ ಒಂದು ತಲೆಮಾರಿನಲ್ಲಿ ಬರುವಂತೆ ಅವರಿಗೆ ಕಾಣಲಿಲ್ಲ. ಅದು ಎಂದೆಂದೂ ಕೈಗೂಡದ ಕಸ ಸಾಗುವ ಸಂಭವವೂ ಉಂಟೆಂದು ಅವರಿಗೆ ಅನಿಸತೊಡಗಿತು. ಅವರು ಯಹೂದ್ಯ ಜನಸಂಖ್ಯೆಯನ್ನು ಹೆಚ್ಚಿಸಲು ಸತತ ಪ್ರಯತ್ನ ನಡಿಸಿದ್ದರು. ಆದರೂ ಅದರಲ್ಲಿ ಅವರಿಗೆ ಅಪೇಕ್ಷಿಸಿದಷ್ಟು ಯಶಸ್ಸು ಲಭಿಸಲಿಲ್ಲ. ಅದೂ ಅಲ್ಲದೆ ಯಹೂದ್ಯ ಮಾತೃಭೂಮಿಯ ಅರ್ಥವನ್ನು ಬ್ರಿಟಿಶರು ಬೇರೆಯೇ ಬಗೆಯಾಗಿ —ತಮ್ಮ ಸ್ವಂತ ಪ್ರಯೋಜನಕ್ಕೆ ಅನುಕೂಲವಾಗುವಂತೆ— ಮಾಡುತ್ತಿರುವರೆಂದು ಅವರಿಗೆ ತೋರತೊಡಗಿತು. ಯಹೂದ್ಯರ ಪ್ರಾಮುಖ್ಯವುಳ್ಳ "ರಾಜ್ಯ"ದ ಸ್ಥಾಪನೆ ಅವರಿಗೆ ಬೇಕಾಗಿತ್ತು. ಅದು ಬರುತ್ತಿರುವ ಲಕ್ಷಣವಿದ್ದಿಲ್ಲ. ಹೀಗೆ ಅವರೂ ಅಸುಖಿಗಳಾಗಿಯೇ ಉಳಿದರು....

೧೯೩೯ ರಲ್ಲಿ ಬ್ರಿಟಿಶರು ಪಾಲಿಸ್ತಾನದ ಅರಬರನ್ನು ಸಂತೈಸುವ ಸಲುವಾಗಿ ಯಹೂದ್ಯರ ವಲಸೆಯನ್ನು ಸೀಮಿತಗೊಳಿಸಿದರು, ಅನಂತರ ಯುದ್ಧ ಪ್ರಾರಂಭವಾದುದರಿಂದ ಈ ಸಮಸ್ಯೆ ಮೂಲೆಗೆ ಬಿದ್ದಿತ್ತು.

### ಯಹೂದ್ಯರ ಹಟ

ಮೊನ್ನೆ ಮುಗಿದ ಮಹಾಯುದ್ಧದಲ್ಲಿ ಸಂಪೂರ್ಣ ನಾಶದ ಸಮಸಮೀಪಕ್ಕೆ ಹೋದ ಒಂದು ಮಾನವ ಜನಾಂಗವೆಂದರೆ ಅದು ಯಹೂದ್ಯರದು. ಹಿಟ್ಲ

(೧೬ ನೇ ಪುಟ ನೋಡಿರಿ)

ವಿಚಾರ ಕಿರಣ

# ಹಣವಿಲ್ಲದ ಹನುಮ

ಲೇ:— "ಸೀತಾರಾಮು"

ಹಣ, ಹಣ ಹಣ! ಎಲ್ಲಿ. ನೋಡಿದಲ್ಲಿ ಹಣಕ್ಕಾಗಿ ಹೆಣಗುವವರೇ. ಕೇಳಿದಲ್ಲಿ ಹಣದ ಸದ್ದು. ಆಲಿಸಿದಲ್ಲಿ ಹಣದ ಆಲಾಪ. ಹಣವೆಂದರೆ ಹೆಣವೂ ಕೂಡ ಬಾಯಿ ತೆರೆಯುವದಂತೆ! ಹಣದಿಂದಲೇ ಸೊಲ್ಲು! ಹಣವಿದ್ದರೇ ಎಲ್ಲ. ಕಾಸಿಲ್ಲದವ ಕಸಕ್ಕಿಂತಲೂ ಕಡೆ. ಕಾಸಿದ್ದವ ಕುಲಗೇಡಿಯಾದರೂ ಕುಲೀನ! ಜಗದ ಒಲವು ಲಕ್ಷ್ಮಿಯ ಕಡೆ. ಸರಸತಿ ಸರಿದು ಹೋಗಿದ್ದಾಳೆ. ಅಷ್ಟೇ ಏಕೆ, ಹಣದ ಮುಂದೆ ಮಾನವತೆ ಕೂಡ ಮಸಳಿಸಿ ಹೋಗಿದೆ. ಮನುಷ್ಯನ ಬೆಲೆ ಕವಡಿಯ ಸಮಾನವಾಗಿದೆ. ಕಳ್ಳಪೇಟೆಯ ಕಳ್ಳತನವೆಂದರೆ ಬಡವರ ಬಾಳಿನ ನೇಣು.

ಆದರೆ? ಹನುಮನಲ್ಲಿ ಹಣವಿಲ್ಲ. ಅವನು ಗಳಿಸುತ್ತಾನೆ. ನಿಜ. ಅದು ಅವನ ಕನಿಷ್ಟ ಅವಶ್ಯಕತೆಗಳಿಗೂ ಹಿಡಿಸದು. ಎಂಟು ತಾಸಿನ ಗಳಿಕೆ ಹನ್ನೆರಡು ತಾಸುಗಳ ಬಳಿಕೆಗೆ ಸಾಲದು. ತಿಂಗಳ ಮೊದಲ ತಾರೀಖಿಗೆ ಸಂಬಳ ತೆಗೆದುಕೊಂಡು ಮನೆ ಮುಟ್ಟುವಾಗಲೇ ಜೇಬಿನ ಅರ್ಧ ಭಾರ ಕಡಿಮೆ. ಹಾಗೂ ಹೀಗೂ ಇಪ್ಪತ್ತು ದಿನಗಳು ಕಳೆಯ ಬೇಕಾದರೆ ರಾಮಾ ರಾಮಾ! ಹೀಗಾಗಿ ಸಾಲದ ಸ್ನೇಹ ಸಂಪಾದಿಸದೆ ಗತ್ಯಂತರವಿಲ್ಲ ಅವನಿಗೆ.

ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು ಎಂದು ಉಪದೇಶಿಸುವವರು ಬಹು ಜನ. ನುಡಿಯುವದು. ಸುಲಭ. ಆಚರಿಸುವದು ಕಷ್ಟ! ಸಮಾಜದಲ್ಲಿ ತನ್ನ ಸ್ಥಾನ ಕಾಯ್ದುಕೊಂಡು ಮಾನವಂತನಾಗಿ ಬಾಳಬೇಕಾಗಿದೆ ಮನುಷ್ಯ. ಇಲ್ಲವಾದರೆ ಹಾಸಿಗೆ ಇದ್ದಷ್ಟು ಕಾಲು ಚಾಚು' ಎನ್ನುವದರ ಅತಿರೇಕವಾಗುವದು. ಕಾಲು ಚಾಚುವಷ್ಟು ಕೂಡಾ ಹಾಸಿಗೇನೇ ಇಲ್ಲವಾದರೆ?

ಬರಿಯ ಜೋಬಿನ ಹನುಮನಿಗೆ ಮನೆಯಲ್ಲಿ ಕೂಡಾ ಸ್ಥಾನವಿಲ್ಲ! ಅಕ್ಕತಂಗಿಯರು ಉಡುಗೊರೆಯಿಲ್ಲದೆ ಉಲಿಯುಂತಿಲ್ಲ. ಅಣ್ಣತಮ್ಮಂದಿರು ಸಾಮರ್ಥ್ಯವಿಲ್ಲದ ಸರಕೆಂದು ಸನಿಹಕ್ಕೆ ತರುವಂತಿಲ್ಲ. ಉಳಿದವರು ಎಷ್ಟೆಂದರೂ ದೂರವೇ! ಅಣ್ಣನ ಹೆಂಡತಿ ಕೂಡ 'ಏಕೆ ಆಗಮಿಸಿತು ಆಸಾಮಿ?' ಎಂಬ ತಿರಸ್ಕಾರ ದೃಷ್ಟಿಯಿಂದ ನೋಡುತ್ತಾಳೆ. ಒಂದು ದಿನ ಅವಳು ಯಾರ ಮುಂದೆಯೊ ನುಡಿದುದನ್ನು ಕದ್ದು ಕೇಳಿದ್ದ ಹನುಮ, "ಒಂದು ತರೊಹಾಂಗಿಲ್ಲ. ಮತ್ತ ನಮ್ಮ ಕಡೆಯಿಂದ ಎಳಿಯೋದ. ಸುಡ್ಲಿ ಯಾಕರ ಬರತಾರೋ ಏನೊ?'' ಕೆಳಗಿನ ಆಂಗ್ಲ ವಾಕ್ಯ ನೆನಪಿಗೆ ಬಂತು ಹನುಮನಿಗೆ "Go to a friend for advice, a ststranger for charity and to a relaive for nothing"

ಅದೇ ಹನುಮ ಹನಮಂತನಿದ್ದರೆ? ಅಕ್ಕ ತಂಗಿಯರು ಆನಂದದಿಂದ ಆಮಂತ್ರಿಸುತಿದ್ದರು: ಬರುವ ಮುಂದೆ ಒಂದು ಪತ್ತಲ, ಒಂದು ಝುಂಪರ್ ಪೀಸ್ ಕೊನೆಗೆ ಒಂದರ್ಧ ಡಜನ್ ಅಕ್ಕಡ, ಬಳೆಗಳನ್ನಾದರೂ ತರುತ್ತಾನೆಂದು. ಅಣ್ಣ ತಮ್ಮಂದಿರು ಅಲಂಗಿಸುತ್ತಿದ್ದರು. ನಾಲ್ಕು ಕಾಸಾದರೂ ಕೈಗೆ ಬೀಳಬಹುದೆಂದು ವೈನಿಯು ತನ್ನ ಮಗನಿಗೆ ಏನಾದರೂ ತಂದಿರಲು ಸಾಕು ಎಂದು ಬಿಸಿ ನೀರಿನ ತಂಬಿಗೆ ತಂದಿಡುತಿದ್ದಳು.

ಹನುಮನಿಗೆ ಅನುಭವದಿಂದ ಅರಿವಾಗಿದೆ. ಹಣವಿಲ್ಲದ ತನ್ನ ಬಾಳು ಹನುಮನಿಗೂ ಹೇಯತೆನಿಸಿತ್ತು. ಆದರೆ ಈಗ ನಾಲ್ಕು ಜನ ನಿಜ ಕೆಳೆಯರ ಸಂಗದಲ್ಲಿ ಉದಾತ್ತ ವಿಚಾರ.... ಆಚಾರಗಳ ಹಿನ್ನೆಲೆಯಲ್ಲಿ, ಗಾಂಧಿಜಿಯವರ ಮಾನವತೆ, ಮೂಡಿಸಿಕೊಂಡಿದ್ದಾನೆ. ತನ್ನ ಬಾಳಿನ ಸತ್ಯತೆಯನ್ನು, ಅರ್ಥವನ್ನು ಅರಿತಿದ್ದಾನೆ.

ಬಹು ಜನ ತಿಳಿದ ಹಾಗೆ ಹಣವೇ ಜೀವನದ ಗುರಿಯಲ್ಲ. ಗಳಿಕೆಯ ಹೆಚ್ಚಳ ಅದರ ಮಾರ್ಗದಲ್ಲಿದೆ, ಹೇರಳತೆಯಲ್ಲಿಲ್ಲ. ಧನವಂತರೆಂದು ಹೇಳಿಕೊಳ್ಳುವ ನಮ್ಮ ಜನರಲ್ಲಿ ಎಷ್ಟು ಜನ ನ್ಯಾಯ ರೀತಿಯಿಂದ ಹಣಗಳಿಸಿದ್ದಾರೆ? ಅವರು ಗಳಿಸಿದ ಹಣ ಬಡಜನರ ಕುತ್ತಿಗೆಯ ಮೇಲೆ ಕುಳಿತು. ಕಳ್ಳತನದಿಂದ ಎತ್ತುವದರ ಬದಲು ಕಾಯಿದೆಯಿಂದ ಕಸಿದಂತೆ!

ಜನತೆಯ ನಿಜವಾದ ಸ್ನೇಹಗಳಿಸುವದೇ ಜೀವನದ ಸಾಫಲ್ಯ. ಮಾನವತೆಯೇ ಮಾನವನ ಮರ್ಮ. ಪರೋಪಕಾರವೇ ಪರಮಾರ್ಥ. ಹಣದ ಆಶೆ ಬಹಳ ಕೀಳು.

ಹನುಮನ ಹಂಬಲವೂ ಇದೇ. ಸತ್ತ ಮೇಲೆ ಸಾವಿರ ಜನ ಸ್ಮರಿಸುವಂತಾದರೆ ಸ್ವರ್ಗಕ್ಕಿಂತಲೂ ಸಂತೋಷ. ಕೊನೆಯಲ್ಲಿ ಒಂದು ಮಾತು:- "It is what is spent and not what is made which will decide whether you are rich or not."

## "ಎರಡು ದೃಷ್ಟಿ !"

೧.

ಹಬ್ಬದ ಭೋಜನ ಮೆಲ್ಲುತೆ ತಣಿಯುತೆ,
ತೂಗು ಮಂಚದಲಿ ವಿರಮಿಸಿರೆ,
ಸವಿ ಸವಿ ಕನಸನು ನೆನೆಯುತೆ. ಕೊನೆಯುತೆ,
ಮನಸಿನ ಶಾಂತಿಯು ಸವೆಯುತಿರೆ;
ಕೇಳಿದೆನೊಂದಾ 'ಗಿಲಿಗಿಲಿ' ಇನಿರವ,
ಹೃದಯ ಕಲಶವನು ಕಿವಿಮಾಡಿ;
ವಿಧಿಯ ಬಳಿಯಿಹ ಭವ್ಯಗವಾಕ್ಷದಿ,
ಕಂಡೆನು ಸೊಗ ತೆರೆ ಮೇಲ್ವಾಡಿ:

ಚಿನ್ನದ ಕಳಸವ ಕೈಯಲಿ ಹಿಡಿದೂ
ಪೀತಾಂಬರ ಕಂಕಣ ತೊಟ್ಟು,
ವರ ಭಾಮಿನಿಯರ ಮಂಡಲವೊಂದು
ವಸಂತೋತ್ಸವವ ಮೆರೆದಿತ್ತು.
ಆ ವೈಭವದಾ ಅನ್ಯತ ಸಮಾಗಮ
ಎನ್ನೆದೆ ಮೊಗ್ಗನು ಕಣಕಿತ್ತು.
ನನ್ನಾ ಕಣ್ಣಿನ ಲೋಹದ ಲೋಲಕ
ಬಣ್ಣ ಬಣ್ಣದಲ್ಲಿ ಅಣಕಿತ್ತು.

೨.

ಹಬ್ಬದ ಭೋಜನ ಮೆಲ್ಲುತೆ ಒಡಲದು,
ಬಹು ಜಡವಾಗುತೆ ಕುಸಿಯುತಿರೆ;
ವಿರಾಮ ಭವನದ ರನ್ನ ಮಂಚದಲಿ;
ದೇಹವನ್ನೆಲ್ಲಾ ಹೊಸೆಯುತಿರೆ;
ಕೇಳಿದೆನೊಂದಾ 'ಖಲ್ ಖಲ್' ಕಟುರವ,
ಕಲ್ಲೆದೆ ಬುರುಡೆಯ ಕಿವಿಮಾಡಿ;
ಬೀದಿಯ ಬಳಿಯಿಹ ಭವ್ಯಗವಾಕ್ಷದಿ
ಕಂಡೆನು ಅದ್ಭುತ ಬಳಿಯೋಡಿ:

ಕಬ್ಬಿಣ ಕೊಳಗವ ಕೈಯಲಿ ತೊಡಿಸೀ
ಬೆನ್ನಿಗೆ ಬಾಸುಳಿಯನೆ ಕೊಡುತ;
'ನಡೆ ನಡೆ' ಎನ್ನುತ ಬೈಯುತ ಲಿದ್ದಿತು,
ಅಧಿಕಾರಿಗಳೆಂಟರ ಕೂಟ.
ಅವನೊ! ರಾಷ್ಟ್ರದ ವರ ಸೇವಕನಿಹ
ಕೈಯಲಿ ತ್ರಿವರ್ಣ ಧ್ವಜವಿತ್ತು;
ಗಂಡುಗಲಿಯ, ಆ ಹಿರಿ ಚಾಗಕ್ಕೆ
ಎನ್ನಯ ಎದೆಯೇ ನಡುಗಿತ್ತು!!

—: ಸಿ. ಕೆ. ದೀಕ್ಷಿತ "ಹಸುವಿನ ಗುಡಿ" ಧಾರವಾಡ.

* * *

## ಹೂ ಅರಳಿದಾಗ

ಜನರು ನಿನ್ನಯ ಗುಡಿಗೆ ಹಂಣುಕಾಯ್ಗಳ ಕೊಂಡು
ವಾರ ವಾರಕು ಬಿಡದೆ ಗುಂಪು ಗೂಡಿಸಿಕೊಂಡು
ಬರುವರೈ ಭಕ್ತಿಯಿಂದೆನ್ನುತಲಿ ಎರಗುವರು
ಭಕ್ತಿ ಎಂಬುವ ಹೂವು ಅರಳಿರದ ಮುನ್ನವರು.

ನೋಡುತಲಿ ನಾನಿದ್ದೆ ಬನದೊಳಗೆ ಹುಡುಕುತ್ತ
ಬನವೆ ನನ್ನಯ ದೇವನಿದ್ದ ದೇಗುಲವೆನುತ
ಅವರು ಕೊಂಡೊಯ್ದಿರುವ ಹೂವನ್ನು ನೋಡುತ್ತ
ನಾನು ಹುಡುಕಿದೆ. ನನ್ನ ಬಳಿಯಲಾ ಹೂವಿತ್ತು
ಆದರೇಂ ಅರಳಿರದ ಮೊಗ್ಗು ತಾನಾಗಿತ್ತು
ನಿನ್ನಯಾ ಪೂಜೆಗದು ಅಯೋಗ್ಯವಾಗಿತ್ತು

ಜಳಕವನು ಮಾಡಿಲ್ಲ ವಾರವನು ಅರಿತಿಲ್ಲ
ಹಂಣು ಕಾಯ್ಗಳು ಹೂವು ಕೈಯೊಳಗೆ ಇಲ್ಲಾ
ನಿನ್ನದಯದಿಂ ದೊರೆತು ಇದುವರೆಗರಳದಿರಲು
ನಿನ್ನದಯದಿಂದೀಗ ಅರಳಿ ಸರಿಯಾಗಿರಲು
ಇಂದು ಹೊರಟಿಹೆ ನಾನು ನಿನ್ನ ಅರಿವಿನ ಗುಡಿಗೆ
ಅರಳಿದ್ದೂ ವರ್ಪಿಸಲ್ಕೆ ನಿನ್ನ ಪಾದದೆಡೆಗೆ

—ಕೆ. ವೀರಯ್ಯ ಶಿಗ್ಗಾಂವ


ಇನಾಂ ! ಇಲ್ಲಿ ನೋಡಿ !! ಇನಾಂ !!!

ಗೋಲ್ಡನ್ ಭಂಗಾರದ ಆಭರಣಗಳು



ಈ ಭಂಗಾರದ ಅಭರಣಗಳನ್ನು ನೋಡುವವರು ಅಸಲ್ ಚಿನ್ನದ ನಗಗಳೆಂದು ಹೇಳುವರು. ಸ್ತ್ರೀಯರು ನೋಡಿದರೆ ಬಹಳ ಸಂತೋಷಪಡುವರು. ಈಗಿನ ಕಾಲದಲ್ಲಿ ಶ್ರೀಮಂತರೂ ಬಹಳವಾಗಿ ಉಪಯೋಗಿಸುತ್ತಿರುವರು. ಪ್ರತಿ ದಿನ ಉಪಯೋಗಿಸಿದರೂ ಅಸಲ್ ಚಿನ್ನದ ನಗಗಳ ಹಾಗೆ ... ವಾಗಿರುವದು. ಈ ರೇಷ್ಮೆ ಪೆಟ್ಟಿಗೆಯಲ್ಲಿರುವ ೧ ಜತೆ ಬಂಗಾರದ ನ್ಯೂ ಮಾಡಲ್ ಬಳೆಗಳು, ೧ ಜತೆ ಸಿನಿಮಾ ಸ್ಟಾರ್ ಲೋಲಕ್, ಒಂದು ನೆಕ್‌ಲಾಸ್ ಎಂಬ ಚೈನ್, ಒಂದು ಇಂಗ್ಲಿಷ್ ಮಾಡಲ್ ರೇಡಿಯೋಕಟ್ ಉಂಗುರ ಈ ೪ ಅಭರಣಗಳು ಒಂದು ಸೆಟ್ ವೇಲ್‌ವೆಟ್ ಪೆಟ್ಟಿಗೆ ಸಹಿತ ಕ್ರಯ: ರೂ. ೫—೮—೦ ಮಾತ್ರ! ಒಂದು ಯು. ಎಸ್. ಎ. ಮಾಡಲ್ ಕಾಲರ್‌ಪಿನ್ ಬಹುಮಾನವಾಗಿ (Free) ಕಳುಹಿಸುತ್ತೇವೆ.

ದಿ. ಫೋಟೋ ಏಜನ್ಸಿ (K) ೧೮ ಬೀಟ್ (18 Beat) ಸಾಕಾರ್ ಪೇಟ್ ಜಿ. ಟಿ. ಮದರಾಸು.



AC. 67 K

ಸೀದಾ ಪದ್ಧತಿಯನ್ನು ವಿಸ್ತರಿಸಬೇಕಾದ ೮ ಕಾರಣಗಳು

ಹಿಂದುಸ್ಥಾನದ ಬಹು ಭಾಗಗಳಲ್ಲಿ ಬರಗಾಲದ ಭೀತಿ ಹೆಚ್ಚಿದೆ.

ಆಹಾರದ ಹುಟ್ಟುವಳಿಯು ಎಲ್ಲರ ಕೊರತೆಗಳನ್ನು ನೀಗಿಸಲು ಸಾಧ್ಯವಾಗದು.

ಜಗತ್ತಿನಲ್ಲಿಯೇ ಆಹಾರದ ಕೊರತೆ ಬಿದ್ದುದರಿಂದ ಹೊರಗಿನಿಂದ ಆಗುವ ಆಯಾತವೂ ಪೂರೈಸುವುದಿಲ್ಲ.

ಅಪರಿಹಾರ್ಯವಾದ ಆಹಾರ ಸಾಮಗ್ರಿಗಳನ್ನು ಸಟ್ಟಾ ವ್ಯಾಪಾರಿಗಳ ಕುತಂತ್ರಕ್ಕೆ ಗುರಿಮಾಡಲಾಗದು.

ಧಾರಣೆಯ ನಿಯಂತ್ರಣವನ್ನು ಕಾಯಲಿಕ್ಕೆ ಬೇಕು.

ಹಾಳಾಗಿ ಹೋಗುವುದನ್ನು ನಿಲ್ಲಿಸಬೇಕು.

ಹೆಚ್ಚಿನ ಸಂಗ್ರಹಗಳುಳ್ಳ ಸ್ಥಳಗಳಲ್ಲಿ ಸೀದಾ ಪದ್ಧತಿಯಿದ್ದರೆ ಬರಬಿದ್ದ ಸ್ಥಳಗಳಿಗೆ ಸಹಾಯವಾಗುವುದು.

ಬರಬಿದ್ದ ಸ್ಥಳಗಳಲ್ಲಿ ಆಹಾರವನ್ನು ಎಲ್ಲರೂ ಸಮನಾಗಿ ಹಂಚಿಕೊಳ್ಳುವರು.

ಈಗಾಗಲೇ ಶಹರ ಮತ್ತು ಹಳ್ಳಿಗಳು ಕೂಡಿ ಸರಾಸರಿ ೧೩॥ ಕೋಟಿ ಜನರು ಸೀದಾ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ.

ಆಹಾರ ಸೀದಾ ಪದ್ಧತಿಯಲ್ಲಿ ಸಹಕಾರ ಕೊಡುವುದು ನಿಮ್ಮ ಕರ್ತವ್ಯವಾಗಿದೆ. ಸೀದಾ ಪದ್ಧತಿಯ ನಿಯಮಗಳನ್ನು ಪ್ರಾಮಾಣಿಕತೆಯಿಂದ ಪಾಲಿಸಿರಿ ಮತ್ತು ನಿಮ್ಮ ಕರ್ತವ್ಯವನ್ನು ಮಾಡಿ ಜನರ ಜೀವವನ್ನುಳಿಸಿರಿ.

ಯೋಗ್ಯ ಧಾರಣೆಗೆ (R) ಎಲ್ಲರಿಗೂ ಆಹಾರ

ಆಹಾರದ ಖಾತೆ, ಹಿಂದುಸ್ಥಾನ ಸರಕಾರ, ಹೊಸ ದಿಲ್ಲಿ, ಇವರ ಪ್ರಕಟನೆ

ಸಂಪಾದಕೀಯ ✲ ✲ ✲ ✲ ✲ ✲ ✲

# ಟೀಕೆ-ಟಿಪ್ಪಣಿಗಳು

## ಭಟಕಳ ಬಂದರ

ಕರ್ನಾಟಕಕ್ಕೆ ಸ್ವತಂತ್ರ ಬಂದರವಿಲ್ಲದ್ದರಿಂದ ಅದರ ಸಂಪದಭಿವೃದ್ಧಿಗೆಷ್ಟೊಂದು ತಡೆಯಾಗುತ್ತಿದೆಂಬುದನ್ನು ಬೇರೆ ಹೇಳಬೇಕಿಲ್ಲ. ಅಂತೆಯೇ ಭಟಕಳ ಬಂದರವನ್ನು ಕೂಡಲೆ ರಚಿಸಿ ಕರ್ನಾಟಕದ ವ್ಯಾಪಾರ ವ್ಯವಹಾರವೆಲ್ಲ ಅದರ ಮುಖಾಂತರ ಸಾಗುವಂತೆ ಏರ್ಪಡಿಸಿರೆಂದು ಕನ್ನಡಿಗರು ಕೇಳುತ್ತಿರುವರು. ಕರ್ನಾಟಕ ಸ್ವತಂತ್ರ ಪ್ರಾಂತವಾಗಿದ್ದರೆ ಈ ಮಾತು ಎಂದೊ ಸಾಧ್ಯವಾಗಿ ಹೋಗುತ್ತಿತ್ತು. ಆದರೆ ಹಲವಾರು ಪ್ರಾಂತಗಳಲ್ಲಿ ಕನ್ನಡಿಗರು ಹರಿದು ಹಂಚಿಹೋಗಿದ್ದರಿಂದ ಕರ್ನಾಟಕದ ಬಂದರಗಳ ಅಭಿವೃದ್ಧಿಯಾಗಲೊಲ್ಲದಂತಾಗಿದೆ. ಈಗೇನೋ ಹೆಚ್ಚು ಜಾಗ್ರತಿಯುಂಟಾಗಿದ್ದರಿಂದ ಭಟಕಳ ಬಂದರದ ಅಭಿವೃದ್ಧಿಗಾಗಿ ಕನ್ನಡಿಗರು ಅಣಿಯಾಗಿರುವರು. ಆದರೆ ಇಷ್ಟರಲ್ಲಿಯೇ ಈ ಬಂದರವನ್ನು ಮೈಸೂರ ಸರಕಾರಕ್ಕೆ ಒಪ್ಪಿಸಿಬಿಡುವ ಯೋಜನೆಯನ್ನು ಮುಂಬಯಿ ಸರಕಾರದವರು ನಡೆಸಿರುವರೆಂದು ಪ್ರಸಿದ್ಧಿಸಲಾಗಿದೆ. ಈ ಯೋಜನೆಯನ್ನು ಬ್ರಿಟಿಶ ಕರ್ನಾಟಕಸ್ಥರು ತೀವ್ರವಾಗಿ ವಿರೋಧಿಸುವರೆಂದು ಬೇರೆ ಹೇಳಬೇಕಿಲ್ಲ. ಮೈಸೂರ ಸರಕಾರವು ಕನ್ನಡಿಗರದಾಗಿದ್ದರೂ ಎಲ್ಲಿಯವರೆಗೆ ಪ್ರಜಾಪ್ರಭುತ್ವ ಸರಕಾರ ಅಲ್ಲಿ ಸ್ಥಾಪಿತವಾಗಿ ಸ್ವತಂತ್ರ ಕರ್ನಾಟಕದಲ್ಲಿ ಅದು ಸಮಾವೇಶವಾಗುವದಿಲ್ಲವೋ ಅಲ್ಲಿಯ ವರೆಗೆ ಬ್ರಿಟಿಶ ಕರ್ನಾಟಕದ ಭಾಗವನ್ನು ಅದರಲ್ಲಿ ಸೇರಿಸಲು ಎಂದಿಗೂ ಒಪ್ಪಲಾಗದು. ಮೈಸೂರು ಎಷ್ಟೇ ಮಾದರಿಯ ಸಂಸ್ಥಾನವಾಗಿದ್ದರೂ ಬ್ರಿಟಿಶ ಕರ್ನಾಟಕದಲ್ಲಿಯಷ್ಟು ಹಕ್ಕು ಬಾಧ್ಯತೆಗಳು ಅಲ್ಲಿನ ಪ್ರಜರಿಗೆ ಇಲ್ಲ. ಈ ಯೋಜನೆಯ ಬಗ್ಗೆ ಕರ್ನಾಟಕ ಏಕೀಕರಣ ಸಂಘದ ಅಧ್ಯಕ್ಷರಾದ ಶ್ರೀ ಜಿನರಾಜ ಹೆಗ್ಗಡೆಯವರು ಅಭಿಪ್ರಾಯಪಡುತ್ತ ಮುಂಬಯಿ ಕನ್ನಡಿಗರು ಇದನ್ನು ವಿರೋಧಿಸಬೇಕೆಂದು ಹೇಳಿರುವರು. ಮುಂಬಯಿ ಕನ್ನಡಿಗರಿಗಷ್ಟೇ ಏಕೆ ಅಖಿಲ ಕರ್ನಾಟಕಸ್ಥರೂ ಕರ್ನಾಟಕ ಏಕೀಕರಣ ಸಂಘದವರೂ ಇದನ್ನು ವಿರೋಧಿಸಬೇಕು. ಈ ಬಗ್ಗೆ ಏಕೀಕರಣ ಸಂಘದವರು ಒಂದು ದಿನವನ್ನು ಗೊತ್ತುಪಡಿಸಿ ಅಂದು ಪ್ರಾಂತದಲ್ಲೆಲ್ಲ ಸಭೆ ಸೇರಿಸಿ ಈ ಯೋಜನೆಯನ್ನು ವಿರೋಧಿಸುವ ಗೊತ್ತುವಳಿ ಪಾಸ ಮಾಡಬೇಕು. ನಾವು ಮೇಲೆ ಹೇಳಿದಂತೆ ಸ್ವತಂತ್ರ ಕರ್ನಾಟಕ ಪ್ರಾಂತದ ಮುಖ್ಯ ಬಂದರವಾಗಲಿರುವ ಭಟಕಳವನ್ನು ಸಂಸ್ಥಾನದಾಡಳಿತೆಗೆ ಒಪ್ಪಿಸಿಕೊಡುವ ಧೋರಣವನ್ನು ನಿಷೇಧಿಸಬೇಕು. ಸ್ವತಂತ್ರ ಪ್ರಾಂತಗಳ ರಚನೆ ಸಮೀಪಿಸಿದ್ದು ಈ ಸಮಯದಲ್ಲಿ ಭಟಕಳ ಬಂದರದಂಥ ಬಂದರವನ್ನು ಕಳೆದುಕೊಳ್ಳುವದು ಬ್ರಿಟಿಶ ಕರ್ನಾಟಕಸ್ಥರಿಗೆ ಎಂದಿಗೂ ಹಿತಪ್ರದವಾಗದು. ಇದನ್ನು ನೆನೆದು ಕನ್ನಡಿಗರು ಕೂಡಲೆ ಇತ್ತ ಗಮನಿಸಬೇಕು.

## ಬೆಲ್ಲದ ಬೊಗಳಿ

ನಮ್ಮ ಧಾರವಾಡ ಜಿಲ್ಹಾ ಮ್ಯಾಜಿಸ್ಟ್ರೇಟರು ಬೆಲ್ಲದ ಧಾರಣಿಯ ಮೇಲೆ ನಿಯಂತ್ರಣ ಹಾಕಿದಂದಿನಿಂದ ಹುಬ್ಬಳ್ಳಿ ಪೇಟೆಯಲ್ಲಿಯ ಬೆಲ್ಲವೆಲ್ಲ ಮಾಯವಾಗಿ ಹೋಗಿದೆ. ಯಾರಲ್ಲಿ ಕೇಳಿದರೂ ಬೆಲ್ಲವೇ ಇಲ್ಲೆಂದು ಹೇಳಹತ್ತಿದ್ದಾರೆ. ಗದಗ ಧಾರವಾಡ ಪೇಟಿಗಳಲ್ಲಿಯೂ ಇದೇ ಬಗೆಯ ತೊಂದರೆಯುಂಟಾಗಿದೆಂದು ತಿಳಿದುಬರುತ್ತದೆ. ಧಾರಣೆ ನಿಯಂತ್ರಣಕ್ಕಿಂತ ಮೊದಲು ಬೇಕಾದಷ್ಟು ಬೆಲ್ಲದ ಸಂಗ್ರಹವಿದ್ದದ್ದು ಈಗ ಒಮ್ಮೆಲೆ ಹೇಗೆ ಮಾಯವಾಯಿತೆಂಬುದನ್ನು ಅಧಿಕಾರಿಗಳು ಕೂಡಲೆ ಶೋಧಿಸಬೇಕು. ಪೇಟೆಯಲ್ಲಿ ಹೊರಗೆ ಬೆಲ್ಲ ಕಾಣಬರುತಿಲ್ಲವಾದರೂ ಒಳಗೆ ಹೋಗಿ ೬೦ ರೂಪಾಯಿವರೆಗೆ ಧಾರಣೆ ಗೊತ್ತುಪಡಿಸಿಕೊಂಡು ರೊಕ್ಕ ಕೊಟ್ಟರೆ ಬೆಲ್ಲ ಸಿಕ್ಕುವದು. ಆದರೆ ಬಿಳಿಯ ಟೊಪ್ಪಿಗೆಯವರಿಗೆ, ಸ್ವಲ್ಪ ಗದ್ದಲ ಮಾಡುವವರಿಗೆ ಏನಾದರೂ ಬೆಲ್ಲ ಸಿಕ್ಕದಂತಾಗಿದೆ. ಜಿಲ್ಹಾ ಮ್ಯಾಜಿಸ್ಟ್ರೇಟರು ಕೂಡಲೆ ಇತ್ತ ಗಮನಿಸುವದು ಅವಶ್ಯವಾಗಿದೆ. ವ್ಯಾಪಾರಸ್ಥರು ತಮ್ಮದೆ ಅದ ಲೋಕಪ್ರತಿನಿಧಿ ಸರಕಾರದ ಹುಕುಮುಗಳನ್ನು ಈ ರೀತಿ ನಿರರ್ಥಕಗೊಳಿಸಲಣಿಯಾದುದು ವಿಷಾದಾಸ್ಪದವಾಗಿದೆ. ಒಂದು ವೇಳೆ ಜಿಲ್ಹಾ ಮ್ಯಾಜಿಸ್ಟ್ರೇಟರ ಧಾರಣಿ ನಿಯಂತ್ರಣದಿಂದ ತಮಗೆ ಹಾನಿಯಾಗುತಿದ್ದರೆ ಅವರ ಕಡೆಗೆ, ಶಿಷ್ಟಮಂಡಳ ಒಯ್ದು ಧಾರಣಿಯಿಂತಿಷ್ಟು ಹೆಚ್ಚಿಸಿರೆಂದು ಕೇಳಿಕೊಳ್ಳಬಹುದು. ಹೀಗೆ ನ್ಯಾಯ ಮಾರ್ಗವನ್ನನುಸರಿಸದೆ ಪೇಟಿಯಲ್ಲಿಯ ಬೆಲ್ಲವನ್ನೆ ಇಲ್ಲದಂತೆ ಮಾಡುವದು ವ್ಯಾಪಾರಸ್ಥರ ರೀತಿನೀತಿಗಳಿಗೆ ಒಗ್ಗದು. ಅಧಿಕಾರಿಗಳು ಮನಸು ಮಾಡಿದರೆ ಕಳ್ಳಪೇಟೆಯನ್ನು ಹೊಕ್ಕು ಬೆಲ್ಲದ ಸಂಗ್ರಹವನ್ನು ಹುಡುಕಿ ತೆಗೆಯಲು ಕಠಿನವೇನೂ ಎನಿಸದು. ಆದರೆ ವ್ಯಾಪಾರಸ್ಥರು ಹಾಗೆ ಮಾಡಗೊಡದೆ ತಾವೇ ತಮ್ಮ ಸಂಗ್ರಹವನ್ನು ಹೊರದೆಗೆದು ನಿಯಂತ್ರಿತ ಧಾರಣೆಯಿಂದ ಮಾರಬೇಕು. ಮೇಲೆ ಹೇಳಿದಂತೆ ಆ ಧಾರಣೆ ಕಡಿಮೆಯೆನಿಸುತಿದ್ದರೆ ಜಿಲ್ಹಾ ಮ್ಯಾಜಿಸ್ಟ್ರೇಟರಲ್ಲಿಗೆ ಹೋಗಿ ಅದನ್ನು ಹೆಚ್ಚಿಸಿಕೊಳ್ಳಬೇಕು. ಅದನ್ನು ಬಿಟ್ಟುಗೊಟ್ಟು ಬೆಲ್ಲವನ್ನೆ ಮಾಯಮಾಡಿ ಜನತೆಯನ್ನು ಛಲಿಸುವದು ಸರಿಯಾಗಲಾರದು. ಸರಕಾರದವರು ಮತ್ತು ವ್ಯಾಪಾರಸ್ಥರು ಇಬ್ಬರೂ ವಿಚಾರ ಮಾಡಿ ಜನತೆಗೆ ಅದ ಈ ಬೆಲ್ಲದ ಬೊಗಳಿಯನ್ನು ಕೂಡಲೆ ಹೋಗಲಾಡಿಸಬೇಕೆಂದು ಅಗ್ರಹಪಡಿಸುತ್ತೇವೆ.

## ಪತ್ರಿಕಾ ಸ್ವಾತಂತ್ರ್ಯ

ಹಿಂದುಸ್ತಾನದಲ್ಲಿ ಪತ್ರಿಕಾ ಸ್ವಾತಂತ್ರ್ಯದ ಮೇಲೆ ಹೇಗೆ ಗದಾಪ್ರಹಾರ ಮಾಡಲ್ಪಡುತಿದೆಂಬುದು ಅನುಭವದ ಮಾತಾಗಿದೆ. ಲಂಡನದಲ್ಲಿ ಕೂಡಿದ ಸಾಮ್ರಾಜ್ಯ ಪತ್ರಿಕಾ ಪರಿಷತ್ತಿನಲ್ಲಿ ಅಮೃತಬಜಾರ ಪತ್ರಿಕೆಯ ಸಂಪಾದಕರಾದ ತುಷಾರ ಕಾಂತಿ ಘೋಷರು ಈ ಸಂಬಂಧವಲ್ಲಿ ತಮ್ಮ ಅಭಿಪ್ರಾಯವನ್ನು ನಿವೇದಿಸುತ್ತ ಹಿಂದುಸ್ತಾನ ಸರಕಾರದವರು ಎಂಥ ಹುಚ್ಚುಚ್ಚಾರ ಸೂಚನೆಗಳನ್ನು ಕೊಡುತಿರುವರೆಂಬದನ್ನು ಸೋದಾಹರಣವಾಗಿ ಹೇಳಿದರು. ಯುದ್ಧ ಮತ್ತು ರಾಷ್ಟ್ರೀಯ ಚಳವಳಿ ಪ್ರಾರಂಭವಾದರೆ ಹಿಂದುಸ್ತಾನದಲ್ಲಿ ಪತ್ರಿಕಾ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಹತ್ತಿಕ್ಕಲಾಗುತಿದೆಯೆಂಬದನ್ನು ವಿವರಿಸಿದರು. ಕೇವಲ ಯುದ್ಧಕ್ಕೆ ಸಂಬಂಧಿಸಿದ ಸುದ್ದಿಗಳನ್ನು ನಿಯಂತ್ರಿಸಿದರೆ ಯಾರೂ ಅಕ್ಷೇಪಿಸಲಾರರು. ಆದರೆ ಯುದ್ಧಕ್ಕೆ ಯಾವ ರೀತಿಯಿಂದಲೂ ಸಂಬಂಧಿಸದೆ ಇದ್ದ ಸುದ್ದಿಗಳನ್ನೂ ಹತ್ತಿಕ್ಕುತಿರುವದನ್ನು ಘೋಷರು ಬಲವಾಗಿ ಟೀಕಿಸಿದರು. ಬಂಗಾಲ ಬರಗಾಲದ ಕಾಲಕ್ಕೆ ಪತ್ರಿಕೆಯ ಮೇಲೆ ಹಾಕಿದ ನಿಯಂತ್ರಣವನ್ನೂ ಮಹಾತ್ಮಾ ಗಾಂಧಿಯವರ ಉಪೋಷಣದ ಕಾಲಕ್ಕೆ ಹಾಕಿದ ನಿಯಂತ್ರಣವನ್ನೂ ಘೋಷರು ಟೀಕಿಸಿ ಇದೆಲ್ಲ ದಬ್ಬಾಳಿಕೆ ನಿಲ್ಲಬೇಕೆಂದು ಕೇಳಿಕೊಂಡರು. ಹಿಂದುಸ್ತಾನ ದಾಸ್ಯರಾಷ್ಟ್ರವಾದ್ದರಿಂದ ಉಳಿದ ಅನೇಕ ತೊಂದರೆಗಳನ್ನನುಭವಿಸುತಿರುವಂತೆ ಪತ್ರಿಕಾ ಸ್ವಾತಂತ್ರ್ಯವನ್ನೂ ಕಳೆದುಕೊಂಡಿದೆ. ಬ್ರಿಟಿಶ್ ಮುಖ್ಯ ಮಂತ್ರಿ ಅ್ಯಟ್ಲಿಯವರು ಪತ್ರಿಕಾ ಸ್ವಾತಂತ್ರ್ಯವನ್ನು ಮನವಾರೆ ಕೊಂಡಾಡಿರುವರು. ಆದರೆ ಅವರ ಅಧೀನದಲ್ಲಿರುವ ಹಿಂದುಸ್ತಾನದಲ್ಲಿಯಾದರೊ ಆ ಸ್ವಾತಂತ್ರ್ಯಕ್ಕೆ ನಿತ್ಯವೂ ಅರೆದಾಳ ಬಡೆಯಲಾಗುತ್ತದೆ. ಈ ಪರಿಸ್ಥಿತಿ ಸುಧಾರಿಸುವಂತೆ ನೋಡಿಕೊಳ್ಳುವದವಶ್ಯವಾಗಿದೆ. ಪತ್ರಿಕಾ ಸ್ವಾತಂತ್ರ್ಯವೆಂದರೆ ಸ್ವೇಚ್ಛಾ ಸ್ವಾಂತಂತ್ರ್ಯವಲ್ಲ, ಹೊಣೆಗೆಟ್ಟ ರೀತಿಯಲ್ಲ. ಪತ್ರಿಕಾ ನೀತಿ ರೀತಿ ನಿಯಮಗಳನ್ನು ಮೀರದೆ ಪತ್ರಿಕೆಗಳನ್ನು ನಡೆಸಿಕೊಂಡು ಹೋಗುವದು ಪತ್ರಿಕಾ ಸ್ವಾತಂತ್ರ್ಯದ ಮೂಲಭೂತ ತತ್ವವಾಗಿದೆ. ಪತ್ರಿಕಾ ಸ್ವಾತಂತ್ರವನ್ನಪೇಕ್ಷಿಸುವ ಪತ್ರಿಕಾಕರ್ತರು ಈ ನೀತಿ ರೀತಿ ನಿಯಮಗಳನ್ನು ಪಾಲಿಸುವಲ್ಲಿ ಸದಾ ತತ್ಪರರಾಗಿರಬೇಕೆಂದು ಬೇರೆ ಹೇಳಬೇಕಿಲ್ಲ.

## ಆರ್ಥಿಕ ಹಿತ ಸಂಬಂಧಗಳು

ಹಿಂದುಸ್ತಾನದ ಘಟನಾತ್ಮಕ ಬದಲಾವಣೆ ಪ್ರಶ್ನೆಯಿದೀಗ ನಡೆದಿರುವಾಗ ಇಂಗ್ಲಂಡು ಮತ್ತು ಹಿಂದುಸ್ತಾನಗಳ ನಡುವಿನ ಆರ್ಥಿಕ ಹಿತ ಸಂಬಂಧಗಳ ನಿರ್ಣಯವಾಗುವದೂ ಅವಶ್ಯವೆಂದು ಬೇರೆ ಹೇಳಬೇಕಿಲ್ಲ. ಸ್ವತಂತ್ರ ಹಿಂದುಸ್ತಾನದಲ್ಲಿ ಬ್ರಿಟಿಶ ಆರ್ಥಿಕ ಹಿತ ಸಂಬಂಧಗಳ ಸ್ಥಾನ ಮಾನಗಳೇನೆಂಬ ಬಗ್ಗೆ ಬ್ರಿಟಿಶ್ ಮಂತ್ರಿತ್ರಯರು ಮೌನ ತಾಳಿದ್ದನ್ನು ಸರ್ ವಿಶ್ವೇಶ್ವರಯ್ಯನವರು ಟೀಕಿಸಿದ್ದಾರೆ. ಅವುಗಳನ್ನು ಈಗಲೇ ಗೊತ್ತುಪಡಿಸುವದವಶ್ಯವಾಗಿದೆ. ಬ್ರಿಟಿಶ್‌ರು ಹಿಂದುಸ್ತಾನದಲ್ಲಿ ಪ್ರಭುತ್ವ ಸ್ಥಾಪಿಸಿದಂದಿನಿಂದ ಇಲ್ಲಿನ ಉದ್ಯೋಗ ಧಂದೆಗಳು ಮೂಲೆಗುಂಪಾಗುತ್ತ ನಡೆದಿವೆಂಬುದೂ ಬ್ರಿಟಿಶರ ಆರ್ಥಿಕ ಸ್ಥಾನಮಾನಗಳು ಹೇಗೆ ಭದ್ರವಾಗುತ್ತ ನಡೆದವೆಂಬುದೂ ಸರ್ವಶ್ರುತ. ಸರಕಾರದ ಈ ಧೋರಣದ ಪರಿಣಾಮವಾಗಿಯೆ ನಿರುದ್ಯೋಗತೆ, ಆರ್ಥಿಕದುಸ್ಥಿತಿ ಮೊದಲಾದವುಗಳು ಸರಸವಾಡುತಿವೆ. ಇದರಿಂದ ಜನತೆ ಅರೆಹೊಟ್ಟೆಯಿಂದಲೊ ಉಪವಾಸವೊ ಜೀವಿಸಬೇಕಾಗಿದೆ. ಈ ಪರಿಸ್ಥಿತಿ ಹೋಗಬೇಕಾದರೆ ಹೊಸದಾಗಿ ಸ್ಥಾಪಿತವಾಗುವ ರಾಷ್ಟ್ರೀಯ ಸರಕಾರವು ಉದ್ಯೋಗಾಭಿವೃದ್ಧಿಯ ಕಡೆಗೆ ಹೆಚ್ಚು ಗಮನ ಕೊಡುವುದು ಅತ್ಯವಶ್ಯವಾಗಿದೆ. ಸರ್ ವಿಶ್ವೇಶ್ವರಯ್ಯನವರು ಈ ಸಂಬಂಧದಲ್ಲಿ ಹೇಳುತ್ತ ಕೇಂದ್ರದಲ್ಲಿ ಉದ್ಯೋಗ ಮಂತ್ರಿಯೊಬ್ಬನನ್ನು ನೇಮಿಸಬೇಕೆಂದೂ ಅವನು ಉದ್ಯೋಗದ ಎಲ್ಲ ಬಗೆಯ ಸಮಸ್ಯೆಗಳನ್ನು ಅಭ್ಯಸಿಸಿ ಅವನ್ನಭಿವೃದ್ಧಿ ಪಡಿಸಬೇಕೆಂದೂ ಅವನು ಹೇಳಿದ್ದಾರೆ. ಔದ್ಯೋಗಿಕ ಅಭಿವೃದ್ಧಿಯಾಗದೆ ದೇಶದ ಆರ್ಥಿಕ ಅಭಿವೃದ್ಧಿಯಾಗದೆಂಬುದು ಜನಜನಿತವಾಗಿದೆ. ಸ್ಥಾಪಿತವಾಗಲಿರುವ ರಾಷ್ಟ್ರೀಯ ಕೇಂದ್ರ ಸರಕಾರವು ಸಣ್ಣ ದೊಡ್ಡ ಉದ್ಯೋಗಾಭಿವೃದ್ಧಿಯತ್ತ ಹೆಚ್ಚು ಲಕ್ಷ ಪೂರೈಸಿ ಅದಕ್ಕಾಗಿ ಪ್ರತ್ಯೇಕ ಖಾತೆಯೊಂದನ್ನು ನಿರ್ಮಿಸಿ ಭರದಿಂದ ಕಾರ್ಯ ಪ್ರಾರಂಭಿಸಬೇಕೆಂದು ಕೇಳಿಕೊಳ್ಳುತ್ತೇವೆ.

## ರೇಲ್ವೆ ಸಂಪು ಮತ್ತು ಆಹಾರ ಸಾರಿಗೆ

ಇದೇ ೨೭ ನೇ ತಾರೀಕಿನಿಂದ ಸಂಪುಹೂಡುವದಾಗಿ ರೇಲ್ವೆ ಕೆಲಸಗಾರ ಮಹಾಮಂಡಲದವರು ರೇಲ್ವೆ ಬೋರ್ಡಿಗೆ ನೋಟೀಸು ಕೊಟ್ಟಿರುವರಷ್ಟೆ. ಆಹಾರ ದುಃಸ್ಥಿತಿಯ ಸದ್ಯದ ಪ್ರಸಂಗದಲ್ಲಿ ರೇಲ್ವೆ ಸಂಪು ಪ್ರಾರಂಭವಾದರೆ ಜನತೆ ಆಹಾರಾಭಾವದಿಂದ ಬಳಲಬೇಕಾಗುವದೆಂದು ಬೇರೆ ಹೇಳಬೇಕಿಲ್ಲ. ಸದ್ಯದ ಪರಿಸ್ಥಿಯನ್ನನು ಲಕ್ಷಿಸಿ ಸರಕಾರದವರು ರೇಲ್ವೆ ಕೆಲಸಗಾರರ ಬೇಡಿಕೆಗಳನ್ನು ಸಹಾನುಭೂತಿಪೂರ್ವಕ ವಿಚಾರಿಸಿ ಅವರೊಡನೆ ಒಡಂಬಡಿಕೆ ಮಾಡಿಕೊಂಡು ಸಂಪನ್ನು ತಪ್ಪಿಸಬೇಕು. ಇದು ಅವಶ್ಯವಾದ ವಿಷಯ. ಸಂಪು ಪ್ರಾರಂಭವಾದರೆ ಆಹಾರ ಕೊರತೆಯೆನಿಸಬಾರದೆಂದು ರೇಲ್ವೆಯವರು ಮೊದಲು ಆಹಾರ ಪದಾರ್ಥಗಳನ್ನು ಕೊರತೆಯ ಪ್ರದೇಶಕ್ಕೆ ಸಾಗಿಸಲಣಿಯಾದುದು ಜಾಣತನದ ಸಂಗತಿಯಾಗಿದೆ. ಉತ್ತರ ಹಿಂದುಸ್ತಾನದಿಂದ ಆಹಾರ ಪದಾರ್ಥಗಳನ್ನು ದಕ್ಷಿಣ ಹಿಂದುಸ್ತಾನಕ್ಕೆ ಸಾಗಿಸಲು ರೇಲ್ವೆಯವರು ಈಗಿನಿಂದಲೆ ವ್ಯವಸ್ಥೆ ನಡೆಸಿರುವರೆಂದು ಪ್ರಸಿದ್ಧವಾಗಿದೆ. ಕಳೆದ ಹಲವು ತಿಂಗಳಗಳಿಂದ ರೇಲ್ವೆಯವರು ಅಹಾರ ಪದಾರ್ಥಗಳಿಗೆ ಮೊದಲ ಪ್ರಾಶಸ್ತ್ಯ ಕೊಡದೆ ಇದ್ದುದರಿಂದ ಆಹಾರದ ಸಾರಿಗೆ ಸರಾಗವಾಗಿ ಸಾಗಲಿಲ್ಲ. ಈಗಲಾದರೂ ರೇಲ್ವೆಯವರು ಇತ್ತ ಗಮನಿಸಿದ್ದು ಅಭಿನಂದನೀಯವಾಗಿದೆ. ಈ ರೀತಿ ಹಿಂದುಸ್ತಾನದಲ್ಲಿಯ ಉಳಿಕೆ ಪ್ರಾಂತಗಳಿಂದ ಕೊರತೆ ಪ್ರಾಂತಗಳಿಗೆ ಆಹಾರ ಪದಾರ್ಥಗಳನ್ನು ತರುವದಲ್ಲದೆ ಮುಂಬಯಿ ಮದ್ರಾಸ ಕರಾಚಿ ಮೊದಲಾದ ಬಂದರಗಳಲ್ಲಿ ಸಂಗ್ರಹವಾಗಿರುವ ಆಹಾರ ಪದಾರ್ಥಗಳನ್ನು ಕೊರತೆ ಪ್ರದೇಶಗಳಿಗೆ ತರಿಸುವುದು ಅವಶ್ಯವಾಗಿದೆ. ದುರ್ದೈವದಿಂದ ಸಾರ್ವತ್ರಿಕ ಸಂಪು ಪ್ರಾರಂಭವಾದುದೆ ಆದರೆ ಜನರು ಆಹಾರಾಭಾವದಿಂದ ಉಪವಾಸ ಸಾಯದಂತೆ ನೋಡಿಕೊಳ್ಳುವದು ಸರಕಾರದ ಮತ್ತು ರೇಲ್ವೆ ಕೆಲಸಗಾರರ ಕರ್ತವ್ಯವಾಗಿದೆ. ರೇಲ್ವೆ ಕೆಲಸಗಾರರಾದರೂ ಈ ಸಂಬಂಧದಲ್ಲಿಯ ಹೊಣೆಯನ್ನು ನಿರ್ವಹಿಸುವರೆಂದು ನಂಬುತ್ತೇವೆ.

## ಬಂಗಾಲದಲ್ಲಿ ದುಃಸ್ಥಿತಿ

ಬಂಗಾಲದ ಆಹಾರ ಪರಿಸ್ಥಿತಿ ದಿನದಿನಕ್ಕೆ ಕೆಡುತ್ತ ನಡೆದಿದೆ. ಹಳ್ಳಿಗಳಿಂದ ಬರುವ ಸುದ್ದಿಗಳನ್ನು ನೋಡಿದರೆ ಆಹಾರಾಭಾವಕ್ಕಾಗಿ ಮರಣಗಳೂ ಸಂಭವಿಸುತಿರುವುದು ತಿಳಿಯುತ್ತದೆ. ಪ್ರಸಿದ್ಧವಾಗುವ ಸುದ್ದಿಗಳು ಯಾವಾಗಲೂ ಕಡಮೆ ಎಂದು ಹೇಳಬಹುದು. ಒಳ ಪ್ರದೇಶದ ಹಳ್ಳಿಗಳಲ್ಲಿನ ಸುದ್ದಿಗಳು ಹೆಚ್ಚಾಗಿ ಬೆಳಕು ಕಾಣುತಿರುವುದಿಲ್ಲ. ಈ ಪರಿಸ್ಥಿತಿಯಲ್ಲಿ ಬಂಗಾಲ ಸರಕಾರದವರು ಈಗಾಗಲೆ ಹೆಚ್ಚು ಜಾಗ್ರತರಾಗುವುದವಶ್ಯವಾಗಿದೆ. ಯಾರನ್ನೂ ಉಪವಾಸ ಸಾಯಗೊಡುವುದಿಲ್ಲೆಂದು ಬಾಯಿಂದ ಹೇಳುತ್ತ ಕೂಡ್ರುವುದರಿಂದ ಪ್ರಯೋಜನವಿಲ್ಲ. ಜನತೆಯನ್ನು ವಿಶ್ವಾಸದಲ್ಲಿ ತೆಗೆದುಕೊಂಡು ಕಾರ್ಯಕ್ಷಣಿಯಾಗಬೇಕು. ಆಯಾ ಪಕ್ಷ ಪ್ರಮುಖರನ್ನು ಕೂಡಿಸಿಕೊಂಡು ಆಹಾರ ಸಮಿತಿಗಳನ್ನು ರಚಿಸಿ ಅವುಗಳ ಸಹಾಯದಿಂದ ಆಹಾರಾಭಾವವನ್ನು ಹೊಡೆದು ಹಾಕಬೇಕು. ಬಂಗಾಲ ಪ್ರಾಂತಿಕ ಕಿಸಾನ ಸಭೆಯವರು ಕೂಡಿಸಿದ ಸಭೆಯೊಂದರಲ್ಲಿ ಈ ಸಂಬಂಧದಲ್ಲಿ ಸರಕಾರಕ್ಕೆ ಕೆಲ ಮಹತ್ವದ ಸಲಹೆ ಕೊಟ್ಟದ್ದಾರೆ. ಸದ್ಯದ ಆಹಾರ ಸಂಗ್ರಹ ಮತ್ತು ಹಂಚಿಕೆಯಲ್ಲಿಯ ಸದೋಷ ಪದ್ಧತಿಯನ್ನು ಬಿಟ್ಟುಗೊಟ್ಟು ಲಂಚಗುಳಿ ಮತ್ತು ಅಯೋಗ್ಯ ಅಧಿಕಾರಿಗಳನ್ನು ಮನೆಗೆ ಕಳಿಸಿ ಬೇರೆ ಬೇರೆ ಪಕ್ಷಗಳು ಕಿಸಾನ ಮತ್ತು ಕೂಲಿಕಾರ ಸಂಸ್ಥೆಗಳ ಸಲಹೆಯಿಂದ ಆಹಾರ ಯೋಜನೆಯನ್ನು ಗೊತ್ತುಪಡಿಸಬೇಕೆಂದು ಕೇಳಿಕೊಂಡಿದ್ದಾರೆ. ೨೫ ಸಾವಿರ ಜನ ಸಂಖ್ಯೆಯಿದ್ದ ನಗರಗಳಲ್ಲೆಲ್ಲ ಸೀದಾ ಪದ್ಧತಿಯನ್ನು ಜಾರಿಯಲ್ಲಿ ತರಬೇಕೆಂದು ಸೂಚಿಸಲಾಗಿವೆ. ಕೊರತೆಯ ಪ್ರದೇಶಗಳಿಗೆ ಕೂಡಲೆ ಎರಡು ಲಕ್ಷ ಟನ್ ಅಕ್ಕಿಯನ್ನು ಸಾಗಿಸಿ ಸೀದಾ ಪದ್ಧತಿಯಿಂದ ಅದನ್ನು ಹಂಚಬೇಕು. ಕಳ್ಳಸಂಗ್ರಹ, ಲಾಭಬಡಕತನವನ್ನು ನಿಲ್ಲಿಸುವುದಕ್ಕಾಗಿ ಕೂಡಲೆ ಕಾಯಿದೆ ಮಾಡಿ ಯೋಗ್ಯರೀತಿಯಿಂದ ಅದನ್ನು ಜಾರಿಯಲ್ಲಿ ತರಬೇಕು. ಈ ಪರಿಸ್ಥಿತಿಯಲ್ಲಿ ಬಂಗಾಲ ಸರಕಾರದವರು ಈ ಆಹಾರದ ಪ್ರಶ್ನೆಯಲ್ಲಿ ಬೇರೆ ಯಾವದೇ ಮತಭೇದದ ವಿಷಯವನ್ನೆತ್ತದೆ ಎಲ್ಲ ಪಕ್ಷ ಪಂಗಡ ಸಂಸ್ಥೆಗಳ ಸಹಕಾರ ತೆಗೆದುಕೊಂಡು ಪರಿಸ್ಥಿತಿಯನ್ನು ಸುಧಾರಿಸಬೇಕು. ಸರಕಾರದ ಅಲಕ್ಷದಿಂದ ಅಗಬಹುದಾದ ಹಾನಿಯನ್ನು ಜನತೆ ಈ ಸಲವೆಂದಿಗೂ ಸಹಿಸದೆಂಬದನ್ನು ಸರಕಾರ ಮನಗಂಡು ಕೂಡಲೇ ಕಾರ್ಯಪ್ರವೃತ್ತವಾಗಬೇಕೆಂದು ಅಗ್ರಹಪಡಿಸುತ್ತೇವೆ.

## ಏಶಿಯ ಭೂಸುಧಾರಣ ಕಾಯಿದೆ

ಏಶಿಯ ಭೂಸುಧಾರಣ ಕಾಯ್ದೆಗೆ ಗವ್ಹರ್ನರ ಜನರಲ್‌ರ ಒಪ್ಪಿಗೆ ದೊರೆತಿದ್ದು ಅದೀಗ ಕಾಯಿದೆಯಾಗಿ ಪರಿಣಮಿಸಿದೆ. ಈ ಕಾಯಿದೆ ಎಷ್ಟೊಂದು ಪ್ರತಿಗಾಮಿ ಮತ್ತು ಹಿಂದೀಯರ ಹಕ್ಕುಬಾಧ್ಯತೆಗಳ ಮೇಲೆ ಗದಾಪ್ರಹಾರ ಮಾಡುವಂತಹದಿದೆಂಬುದನ್ನು ನಾವು ಈ ಮೊದಲು ಅನೇಕ ಸಲ ಬರೆದಿದ್ದೇವೆ. ಅಂತೆಯೇ ಅಲ್ಲಿನ ಹಿಂದೀಯರು ಇದನ್ನು ತೀವ್ರವಾಗಿ ವಿರೋಧಿಸುತ್ತಿರುವರು. ಹಿಂದುಸ್ತಾನ ಸರಕಾರದವರಿಗಾದರೂ ಈ ಕಾಯಿದೆಯ ಪ್ರತಿಗಾಮಿ ಸ್ವರೂಪ ಗೊತ್ತಾಗಿದ್ದರಿಂದ ಅವರೂ ಇದನ್ನು ವಿರೋಧಿಸಿ ಪ್ರತಿಕಾರೋಪಾಯಗಳನ್ನು ಯೋಜಿಸಿದ್ದಾರೆ. ದಕ್ಷಿಣ ಅಫ್ರಿಕೆಯೊಡನೆ ವ್ಯಾಪಾರಿ ಸಂಬಂಧವನ್ನು ಕಡಿದುಕೊಂಡಿದ್ದಾರೆ ಇದೀಗ ಅಲ್ಲಿನ ಹಾಯಕಮೀಶನರರನ್ನು ಹಿಂದಕ್ಕೆ ಕರಿಸಿಕೊಂಡಿದ್ದಾರೆ. ಆದರೆ ಇಷ್ಟರಿಂದೆ ಜನರಲ್ ಸ್ಮಟ್ಸರು ಹಾದಿಗೆ ಬರುವರೆಂಬದಾಗಿ ಭಾವಿಸಲಾಗದು. ಅವರಷ್ಟೊಂದು ಗಟ್ಟಿಗರಿರುವರು. ದರಬಾನದಲ್ಲಿಯ ಹಿಂದೀಯರು ಈಗಾಗಲೇ ಸತ್ಯಾಗ್ರಹ ಸಾರುವ ಸಿದ್ಧತೆಯನ್ನು ನಡಿಸಿದ್ದಾರೆ. ಮೊದಲು ಬರಿ ದರ್ಬಾನದಲ್ಲಿ ಸತ್ಯಾಗ್ರಹ ಪ್ರಾರಂಭವಾಗಿ ಅನಂತರ ಟ್ರಾನ್ಸವಾಲ ಮೊದಲಾದ ಕಡೆಗೂ ಅದು ಹಬ್ಬಬಹುದು. ಈ ರೀತಿ ಸತ್ಯಾಗ್ರಹ ಹಬ್ಬಿದ್ದಾದರೆ ಪರಿಸ್ಥಿತಿ ಭಯಾನಕವಾಗಬಹುದು. ಬ್ರಿಟಿಶ ಸರಕಾರದವರು ಈ ಸಂದರ್ಭದಲ್ಲಿ ಹೆಚ್ಚು ತಮ್ಮ ವರ್ಚಸ್ಸನ್ನು ಪಯೋಗಿಸಿ ಅಲ್ಲಿನ ಹಿಂದೀಯರ ಗೋಳನ್ನು ನಿವಾರಿಸಲು ಮುಂದಾಗಬೇಕು. ಬ್ರಿಟಿಶ ಸರಕಾರದಿಂದಲೂ ಈ ಕಾರ್ಯವಾಗದಿದ್ದರೆ ಯುಕ್ತರಾಷ್ಟ್ರ ಸಂಘಕ್ಕೆ ದೂರಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇವೆ.

# ಸಮುಪ್ರಾತಿನಿಧ್ಯ ಕಂದರಕ್ಕಿಳಿಯಲು ಕಾಂಗ್ರೆಸದ ಸಕಾರ : ದಿಲ್ಲಿಯಲ್ಲಿ ಬಿಕ್ಕಟ್ಟು : ನರೇಂದ್ರರು ಯೋಜನೆ ಒಪ್ಪಿದರು : ಸೀಖರು ವಿರೋಧಿಸುವರು

ಜಿನ್ನಾ ಸಾಹೇಬರು ಮತ್ತು ಅವರ ಮುಸ್ಲಿಂ ಲೀಗ್ ಮಂಡಲ ಬ್ರಿಟಿಶ ಮಂತ್ರಿಗಳ ಯೋಜನೆಯುನ್ನು ಪೂರ್ಣ ಸಂತೋಷದಿಂದಲ್ಲವಾದರೂ ಸ್ವೀಕರಿಸಿದ್ದರಿಂದ ಕಳೆದವಾರ ವಾತಾವರಣದಲ್ಲಿ ಉಂಟಾಗಿದ್ದ ಹುರುಪು ಈ ವಾರ ದಿಲ್ಲಿಯ ವಾತಾವರಣದಿಂದ ಮಾಯವಾಗಿ ಬಿಟ್ಟಿದೆ. ಮಧ್ಯಕಾಲದಲ್ಲಿ ಸರಕಾರದಲ್ಲಿ ಜಿನ್ನಾ ಸಾಹೇಬರು ಬೇಡಿರುವ ಕಾಂಗ್ರೆಸ್ ಲೀಗ್ ಸಮಪ್ರಾತಿನಿಧ್ಯವನ್ನು ಕಾಂಗ್ರೆಸ್ಸು ದೃಢವಾಗಿ ವಿರೋಧಿಸಿರುವದೇ ಈಗುಂಟಾಗಿರುವ ಬಿಕ್ಕಟ್ಟಿನ ಕಾರಣ. ಕಾಂಗ್ರೆಸ್ಸಿನ ಮನವೊಲಿಸಲು ಈ ವರೆಗೆ ವೇವೆಲ್ಲರು ಕೈಕೊಂಡ ಉಪಾಯಗಳಾವುವೂ ಫಲಕಾರಿಯಾಗಿಲ್ಲ ಈ ನಡುವೆ ನರೇಂದ್ರರೂ ಸಭೆ ಸೇರಿ ಯೋಜನೆಯನ್ನು ಅಂಗೀಕರಿಸಿದರೆಂಬ ಮಾತಿನಿಂದ ಪರಿಸ್ಥಿತಿಯ ಮೇಲೆ ಏನೂ ಪರಿಣಾಮವಾಗಿಲ್ಲ.

## ಜಿನ್ನಾರಿಗೆ ಮಂತ್ರಿಗಳ ವಾಗ್ದಾನ ?

ಬ್ರಿಟಿಶ ಸೂಚನೆಗಳ ಬಗ್ಗೆ ಕಾಂಗ್ರೆಸ ಕಾರ್ಯಸಮಿತಿ ಪಾಸು ಮಾಡಿದ್ದ ಗೊತ್ತುವಳಿಯಲ್ಲಿ ಮಧ್ಯಕಾಲ ಸರಕಾರದ ಸ್ಥಾನಮಾನದ ಬಗೆಗೆ ಎತ್ತಿದ ಸಂಶಯಗಳೇ ಎಲ್ಲಕಿಂತ ಹೆಚ್ಚು ಲಕ್ಷ ಸೆಳೆದಿದ್ದವು. ಆದ್ದರಿಂದ ಆ ವಿಷಯದಲ್ಲಿ ವಾಯಿಸರಾಯರು ಹೊರಡಿಸಿದ ಸ್ಪಷ್ಟೀಕರಣ ತೃಪ್ತಿಕರವಾಗಿದೆಯೆಂದು ಕಾರ್ಯಸಮಿತಿ ತಾ. ೯ ರ ಸಭೆಯಲ್ಲಿ ನಿರ್ಧರಿಸಿದೊಡನೆ ರಾಷ್ಟ್ರೀಯ ಸರಕಾರದ ರಚನೆ ಇನ್ನೇನು ಗಳಿಗೆಗಳ ಮಾತೆಂಬಂತೆ ಭಾಸವಾಗಿತ್ತು. ಆದರೆ ಅದರೊಡನೆಯೆ ಯಾವುದೇ ಬಗೆಯ ಸಮಪ್ರಾತಿನಿಧ್ಯಕ್ಕೆ ಕಾಂಗ್ರೆಸ್ಸಿನ ವಿರೋಧವುಂಟೆಂದು ವಾಯಿಸರಾಯರಿಗೆ ತಿಳಿಸಲಾಯಿತು. ಸಿಮಲೆಯ ಮೊದಲನೆ ಪರಿಷತ್ತಿನ ಕಾಲಕ್ಕೆ ದೇಸಾಯಿ-ಲಿಯಾಕತ್ ಸೂತ್ರದ ಮೇರೆಗೆ ಕಾಂಗ್ರೆಸ್-ಲೀಗ್ ಅಥವಾ ಹಿಂದು-ಮುಸ್ಲಿಂ ಸಮಪ್ರಾತಿನಿಧ್ಯಕ್ಕೆ ಕಾಂಗ್ರೆಸ್ಸು ಅಸ್ತು ಎಂದಿತ್ತು. ಆದ್ದರಿಂದ ಕಾಂಗ್ರೆಸ್ಸು ಈ ಬಾರಿ ಸಮಪ್ರಾತಿನಿಧ್ಯವನ್ನು ವಿರೋಧಿಸುವದೆಂಬ ವಾರ್ತೆಗಳನ್ನು ಬ್ರಿಟಿಶ ಮಂತ್ರಿಗಳಾಗಲಿ ವಾಯಿಸರಾಯರಾಗಲಿ ಅಷ್ಟು ಮಹತ್ವದ್ದೆಂದು ಭಾವಿಸಿರಲಿಲ್ಲವೇನೊ. ಆದರೆ ಈಗ ಅದು ದೃಢವಾಗಿ ಹಟ ಹಿಡಿದಿರುವದರಿಂದ ಅವರೆಲ್ಲರಿಗೆ ಮಾತ್ರವಲ್ಲ ಜಿನ್ನಾ ಸಾಹೇಬರಿಗೆ ಕೂಡ ಆಶ್ಚರ್ಯವಾಗಿದೆಯಂತೆ ! ಇತ್ತ ವಾಯಿಸರಾಯರು ಜಿನ್ನಾ ಸಾಹೇಬರಿಗೆ ಕಾಂಗ್ರೆಸ್ಸಿನೊಡನೆ ನಡುಗಾಲ ಸರಕಾರದಲ್ಲಿ ಲೀಗಕ್ಕೆ ಸಮಪ್ರಾತಿನಿಧ್ಯವನ್ನು ಮೊದಲೇ ವಾಗ್ದಾನ ಮಾಡಿಬಿಟ್ಟಿರುವರೆಂದು ಹೇಳಲಾಗಿದೆ. ಅದರಲ್ಲಿ ಕಾಂಗ್ರೆಸ್ಸಿಗರಿಗೆ ೫ ಲೀಗಿನವರಿಗೆ ೫ ಮತ್ತು ಕ್ರಿಶ್ಚಿಯನ್ ೧ ಸೀಖ ೧ ಹೀಗೆ ಸ್ಥಾನಗಳ ಹಂಚುವಳಿ ಮಾಡಬೇಕೆಂಬ ಯೋಜನೆ ಕೂಡ ಆಗಿತ್ತೆಂದು ತೋರುತ್ತದೆ. ಕಾಂಗ್ರೆಸ್ಸಿನ ದೃಢಚಿತ್ತದಿಂದ ಮಂತ್ರಿತ್ರಯರೂ ವಾಯಿಸರಾಯರೂ ಗಾಬರಿಯಾದರು. ಅಂದಿನಿಂದ ಪ್ರತಿನಿತ್ಯವೆಂಬಂತೆ ಮಹಾತ್ಮಾ ಗಾಂಧಿ, ಜವಾಹರಲಾಲ, ಮೌಲಾನಾ ಸಾಹೇಬ, ಸರದಾರ ಪಟೇಲರಲ್ಲಿ ಒಬ್ಬರಲ್ಲ ಒಬ್ಬರು ಮತ್ತು ಕೆಲವೊಮ್ಮೆ ಒಬ್ಬರಿಗಿಂತ ಹೆಚ್ಚು ಜನರು ಒಂದೇ ದಿನ, ವಾಯಿಸರಾಯರೊಡನೆ ಭೆಟ್ಟಿಯಾಗಿ ಮಾತುಕತೆ ನಡೆಸಿದುದು ಕಂಡುಬರುತ್ತದೆ ಒಂದೊಂದು ಸಂದರ್ಶನ ಎರಡೆರಡು ತಾಸಿಗೂ ಮಿಕ್ಕಿ ನಡೆಯುತ್ತಿದೆ. ಹೊಸದಿಲ್ಲಿಯಲ್ಲಿ ಸಂತತ ಅಧಿವೇಶನದಲ್ಲಿರುವ ಕಾಂಗ್ರೆಸ್ ಕಾರ್ಯಸಮಿತಿಯಲ್ಲಿ ಹೊಸ ಹೊಸ ಸೂಚನೆಗಳು ಒಡನೊಡನೆ ಚರ್ಚಿಸಲ್ಪಡುತ್ತಿವೆ. ಜಿನ್ನಾ ಸಾಹೇಬರಿಗೂ ಮಂತ್ರಿಶಿಷ್ಟರು ಮತ್ತು ವಾಯಿಸರಾಯರು ಈ ಮಾತುಕತೆಗಳ ಪ್ರಗತಿಯನ್ನು ಆಗಿಂದಾಗ್ಗೆ ಅರುಹುತಿರುವರು. ಆದರೆ ನಿಜವಾದ ಪ್ರಗತಿಯೇನೂ ಬಹಳ ಆದಂತೆ ತೋರಲಿಲ್ಲ. ಆದ್ದರಿಂದ ತಾ. ೧೧ ಕ್ಕೆ ವಾಯಿಸರಾಯರು ಮಹಾತ್ಮಾ ಗಾಂಧಿಯವರನ್ನು ಕರೆಸಿಕೊಂಡು ಅವರ "ಮೊರೆಹೊಕ್ಕರೆಂದೂ" ಹೇಗಾದರೂ ಮಾಡಿ ಕಾಂಗ್ರೆಸ್ಸು ಸಮಪ್ರಾತಿನಿಧ್ಯಕ್ಕೆ ಒಪ್ಪುವಂತೆ ಮಾಡಿರೆಂದು ಅವರಿಗೆ ವಿನಂತಿ ಮಾಡಿಕೊಂಡರೆಂದೂ ವಾರ್ತೆ ಬಂತು. "ಕಾಂಗ್ರೆಸ್ಸಿನ ಘನತೆಗೊಪ್ಪುವ ಔದಾರ್ಯವನ್ನು ಈ ವಿಷಯದಲ್ಲಿ ತೋರಬೇಕೆಂ"ದು ಅವರು ಬೆನ್ನುಸವರಿದರಂತೆ. ಆದರೆ ಗಾಂಧೀಜಿಯವರು ಈ ಕೆಲಸಕ್ಕೆ ಒಪ್ಪಿದಂತಿಲ್ಲ. ಸಮಪ್ರಾತಿನಿಧ್ಯದ ತತ್ವವೇ ಅನ್ಯಾಯದ್ದಿರುವದರಿಂದ ಅದಕ್ಕೆ ಸಮ್ಮತಿಸುವಂತೆ ತಾವು ಕಾಂಗ್ರೆಸ್ಸಿಗೆ ಒತ್ತಾಯಪಡಿಸಲಾರೆವೆಂದು ಗಾಂಧೀಜಿಯವರು ಹೇಳಿದರಂತೆ.

## ಈಗೇಕೆ ಈ ತೊಡಕು?

ಕಳೆದ ವರ್ಷ ಸಮಪ್ರಾತಿನಿಧ್ಯಕ್ಕೆ ಸೈಗುಟ್ಟಿದ ಕಾಂಗ್ರೆಸ್ಸು ಈಗೇಕೆ ಹೀಗೆ ಹಟತೊಟ್ಟಿದೆ? ಅಂದಿನಿಂದ ಇಂದಿಗೆ ಎಷ್ಟೋ ಸ್ಥಿತ್ಯಂತರಗಳಾಗಿರುವದೇ ಇದಕ್ಕೆ ಕಾರಣವೆಂದು ಹೇಳಬೇಕಾಗುವದು. ಆಗ ಇನ್ನೂ ಜಪಾನ ಯುದ್ಧ ನಡೆದಿತ್ತು. ಆದ್ದರಿಂದ ಹೆಚ್ಚು ತಿಕ್ಕಾಟವಿಲ್ಲದೆ ಹಿಂದೀಯರ ಕೈಗೆ ಅಧಿಕಾರ ಸೆಳೆದುಕೊಳ್ಳುವದಕ್ಕಾಗಿ ಕಾಂಗ್ರೆಸ್ಸು ಸಮಪ್ರಾತಿನಿಧ್ಯಕ್ಕೆ ಒಪ್ಪಿತ್ತು. ಅದಲ್ಲದೆ ಆಗ ಘಟನೆಯ ವಿಷಯಕ್ಕೆ ಯಾವದೇ ಯೋಜನೆಯಿದ್ದಿಲ್ಲ. ಈಗ ಮಂತ್ರಿತ್ರಯರು ಸಿದ್ಧಗೊಳಿಸಿದ ಯೋಜನೆಯಲ್ಲಿ ಮುಸ್ಲಿಂ ಲೀಗ ಮನೋರಥಕ್ಕೆ ಮಾರ್ಗ ಮಾಡಿಕೊಡಲು ಎಷ್ಟೋ ಮಹತ್ವದ ತತ್ವಗಳನ್ನು ಬದಿಗೊತ್ತಲಾಗಿದೆ. ಪ್ರಾಂತಗಳ ಗುಂಪುಕಟ್ಟೋಣದರಿಂದ ಲೀಗದ ಶಕ್ತಿಗೆ ಪುಟಕೊಟ್ಟಂತಾಗಿದೆ. ಇಂಥ ಸ್ಥಿತಿಯಲ್ಲಿ ಕೇಂದ್ರದ ಮಂತ್ರಿಮಂಡಲದಲ್ಲಿ ಯಾವದೇ ಬಗೆಯ ಸಮಪ್ರಾತಿನಿಧ್ಯಕ್ಕೆ ಇಂಬುಗೊಟ್ಟರೆ ಜಿನ್ನಾಸಾಹೇಬರು ತಮ್ಮ ಸ್ವಾಭಾವಿಕ ಆತ್ಮಾಶೆಯ ಕೈಚಾಚಿ ನಾಳೆ ಯೂನಿಯನ್ ಸರಕಾರದಲ್ಲಿ ಮತ್ತು ಶಾಸನ ಸಭೆಯಲ್ಲಿ ಸಮಪ್ರಾತಿನಿಧ್ಯವನ್ನು ಸಾಧಿಸಿಕೊಳ್ಳಲು ಅದನ್ನು ನಿಚ್ಚಣಿಕೆಯಾಗಿ ಉಪಯೋಗಿಸಿಕೊಳ್ಳಬಹುದು. ಒಮ್ಮೆ ಇಂಥ ದುಷ್ಟ ತತ್ವಗಳಿಗೆ ತಾತ್ಕಾಲಿಕ ಅನುಕೂಲ್ಯದ ದೃಷ್ಟಿಯಿಂದ ಮನ್ನಣೆ ಕೊಟ್ಟುಬಿಟ್ಟರೆ ಮತ್ತೆ ಆ ಸ್ಥಿತಿಯಿಂದ ಹಿಂದೆ ಸರಿಯುವದು ಕಠಿನವಾದ, ಏಕೆ ಅಸಾಧ್ಯವಾದ ಮಾತೆಂಬುದು ಅನುಭವದ ಸಂಗತಿ. ಇದಲ್ಲದೆ ಕಾಂಗ್ರೆಸ್ಸು ಸಹಕರಿಸದಿದ್ದರೆ ಜಿನ್ನಾಸಾಹೇಬರನ್ನೇ ಸರಕಾರ ರಚಿಸಲು ವಾಯಿಸರಾಯರು ಕೇಳಿಕೊಳ್ಳುವರೆಂಬುವೇ ಮೊದಲಾದ ಪ್ರಚಾರವನ್ನು ಲೀಗ ವರ್ಗಗಳು ಪ್ರಾರಂಭಿಸಿವೆ. ಇಂಥ ಬೆದರಿಕೆಗಳಿಗೆ ಸೊಪ್ಪುಹಾಕಿ ತತ್ವಗಳಿಗೆ ಅರದಾಳ ಹಚ್ಚಲು ಕಾಂಗ್ರೆಸ್ಸು ಸಿದ್ಧವಾಗಲಾರದು. ಆದ್ದರಿಂದಲೇ ಅದರ ಪಾಲಿನ ೫ ಮಂತ್ರಿಗಳನ್ನಲ್ಲದೆ ಉಳಿದ ೨ ಮಂತ್ರಿಗಳ ಆಯ್ಕೆಯ ವಿಷಯದಲ್ಲಿಯೂ ಕಾಂಗ್ರೆಸ ಅಭೀಷ್ಟವನ್ನೇ ಅನುಸರಿಸುವದಾಗಿ ವಾಯಿಸರಾಯರು ಹೇಳಿದ್ದರೂ ಕಾಂಗ್ರೆಸು ತನ್ನ ನಿಲುಮೆಯನ್ನು ಬದಲಿಸಲಿಲ್ಲ. ನಿರಾಶೆಗೆ ಇನ್ನೂ ಕಾರಣವಿಲ್ಲೆಂದು ಮಹಾತ್ಮರು ಹೇಳಿದ್ದರೂ ಈ ಪ್ರಶ್ನೆಯ ಬಂಡೆಗಲ್ಲಿನಲ್ಲೆ ಮಂತ್ರಿತ್ರಯರ ಎಲ್ಲ ಪ್ರಯತ್ನಗಳೂ ಅವಸಾನಕಾಣಬಹುದೆಂಬ ಭಯವುಂಟಾಗಿದೆ.

## ಇತರ ಆಕ್ಷೇಪಗಳು

ಕಾಂಗ್ರೆಸ್ಸು ಬೇರೆ ಕೆಲವು ಮುದ್ದೆಗಳನ್ನು ಎತ್ತಿ ಮಂತ್ರಿತ್ರಯರು ಯೋಜನೆಯ ಸಂಬಂಧದಲ್ಲಿ ಮಾಡಿದ ಸ್ಪಷ್ಟೀಕರಣಗಳನ್ನು ಟೀಕಿಸಿದೆ. ಘಟನಾಸಮಿತಿಯ ಚುನಾವಣೆಯಲ್ಲಿ ಯುರೋಪಿಯನ್ ಸದಸ್ಯರು (ಶಾಸನ ಸಭೆಗಳಲ್ಲಿನ) ಭಾಗವಹಿಸಬಾರದೆಂದು ಅದು ಒತ್ತಾಯಗೊಳಿಸಿದೆ. ಎಲ್ಲ ಶಾಸನ ಸಭೆಗಳಲ್ಲಿಯೂ ಯುರೋಪಿಯನ್‌ರಿಗೆ ಅವರ ಸಂಖ್ಯಾ ಪ್ರಮಾಣದಿಂದ ನೋಡಿದರೆ ಅತಿರೇಕವಾದ ಪ್ರಾತಿನಿಧ್ಯವನ್ನು ಕೊಡಲಾಗಿದೆ. ಬಂಗಾಲ ಆಸಾಮ ಶಾಸನ ಸಭೆಗಳಲ್ಲಂತೂ ಅವರಿಗೆ ಅಸಾಧ್ಯ ಭಾರವಿದೆ. ಮುಖ್ಯವಾಗಿ ಆರ್ಥಿಕ ಹಿತಸಂಬಂಧದಿಂದಲೇ ಈ ಹದಮೀರಿದ ಬಲವನ್ನು ಪಡೆದ ಯುರೋಪಿಯನ್ನರು ತಮ್ಮ ಶಕ್ತಿಯನ್ನು ಪ್ರತಿಗಾಮಿಗಳ ಪಕ್ಷದಲ್ಲೇ ಉಪಯೋಗಿಸಿರುವರೆಂಬುದು ಇತಿಹಾಸಸಿದ್ಧ ಮಾತು. ಈ ಮಹನೀಯರು ಮುಸ್ಲಿಂ ಘಟನಾಸಮಿತಿ ಸದಸ್ಯರ ಆಯ್ಕೆಯಲ್ಲಿ ಯಾವ ವಿಧವಾದ ಪ್ರಭಾವವನ್ನೂ ಬೀರಲಾರದೆ ಹೋದರೂ ಸಾಮಾನ್ಯ ಸ್ಥಾನಗಳ ಆಯ್ಕೆಯಲ್ಲಿ—ಮುಖ್ಯವಾಗಿ ಬಂಗಾಲ ಆಸಾಮುಗಳಲ್ಲಿ—ತುಂಬ ಕೈವಾಡ ಮಾಡಬಹುದು. ಅದು ಅಲ್ಲಿ ಕಾಂಗ್ರೆಸ್ಸಿನ ಈಗಾಗಲೆ ದುರ್ಬಲವಾದ ಸ್ಥಿತಿಯನ್ನು ಇನ್ನಷ್ಟು ದುರ್ಬಲಗೊಳಿಸುವದು. ಒತ್ತಾಯದ ಗುಂಪುಕಟ್ಟೋಣದ ವಿಷಯಕ್ಕೂ ಮಂತ್ರಿತ್ರಯರ ಸ್ಪಷ್ಟೀಕರಣ ಮೂಲಯೋಜನೆಗೆ ಅನುಗುಣವಾಗಿಲ್ಲೆಂದು ಕಾರ್ಯಸಮಿತಿ ದೂರಿದೆ. ದೇಶದ ಪ್ರಸಿದ್ಧ ವಕೀಲರು, ಯೋಜನೆಯ ವಾಕ್ಯಜಾಲವನ್ನು ಅನುಸರಿಸಿದರೆ ಯಾವದೇ ಪ್ರಾಂತವನ್ನು ಯಾವದೇ ಅವಸ್ಥೆಯಲ್ಲಿ ಒತ್ತಾಯದಿಂದ ಯಾವುದೊಂದು ಗುಂಪಿಗೆ ಸೇರಿಸಬರುವದಿಲ್ಲೆಂದು ಅಭಿಪ್ರಾಯಪಡುತಿದ್ದು ಮಂತ್ರಿತ್ರಯರು ಈಗ ತಮ್ಮ ಆಶಯ ಹಾಗಿಲ್ಲವೆಂದು ಹೇಳುವದು ಅಸಮಂಜಸವೆಂದು ಕಾರ್ಯಸಮಿತಿಯ ಅಭಿಪ್ರಾಯ.

## ನರೇಂದ್ರರ ಸಮ್ಮತಿ

ಮುಂಬಯಿಯ ವೈಭವಶಾಲಿ ತಾಜಮಹಾಲ ಹಾಟೆಲಿನಲ್ಲಿ ಸಭೆ ಸೇರಿದ ಭಾರತದ ನರೇಂದ್ರರೂ ಅವರ ಪ್ರತಿನಿಧಿಗಳೂ ಬ್ರಿಟಿಶ ಯೋಜನೆಯನ್ನು ಮಾನ್ಯ ಮಾಡಿದರು. ಆದರೆ ಅವರಿಗೂ ಕೆಲ ಸ್ಪಷ್ಟೀಕರಣಗಳು ಅವಶ್ಯವಾಗಿದ್ದು ಅವುಗಳ ಬಗ್ಗೆ ಸಂಬಂಧ ಪಟ್ಟವರನ್ನು ವಿಚಾರಿಸುವದಾಗಿ ನಿರ್ಣಯಿಸಲ್ಪಟ್ಟಿತು. ಈ ಬಗ್ಗೆ ಸಂಧಾನ ಸಮಿತಿಯೊಂದನ್ನು ಏರ್ಪಡಿಸಲು ಅವರು ನಿರ್ಧರಿಸಿದರು. ಸಂಸ್ಥಾನಗಳಲ್ಲಿ ಘಟನಾತ್ಮಕ ರಾಜ್ಯಭಾರ, ಕಾಯಿದೆಯ ರಾಜ್ಯ ನಡೆಯುವಂತೆ ೧೨ ತಿಂಗಳುಗಳಲ್ಲಿ ವ್ಯವಸ್ಥೆ ಮಾಡಬೇಕೆಂದು ನರೇಂದ್ರ ಮಂಡಲದ ಸ್ಥಾಯೀ ಸಮಿತಿ ಸಂಸ್ಥಾನಿಕರಿಗೆ ವಿನಂತಿ ಮಾಡಿಕೊಂಡಿದೆ. ಸಂಸ್ಥಾನಿ ಪ್ರಜೆಗಳ ಮೂಲಭೂತ ಹಕ್ಕು ಬಾಧ್ಯತೆಗಳ ಒಂದು ತಾಮ್ರಪಟವನ್ನೂ ಸ್ಥಾಯೀ ಸಮಿತಿ ಸಿದ್ಧಗೊಳಿಸಿದೆ. ಬ್ರಿಟಿಶ ಯೋಜನೆಯಲ್ಲಿ ನರೇಂದ್ರರಿಗೆ ಇನ್ನು ಮುಂದೆ ಬ್ರಿಟಿಶ ಸರಕಾರ ಯಾವ ಬಗೆಯ ಸಂರಕ್ಷಣೆಯನ್ನೂ ಕೊಡುವದಿಲ್ಲವೆಂಬ ಮಾತು ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆಯಾದ್ದರಿಂದ ನರೇಂದ್ರರು ಇನ್ನು ಮುಂದೆ ತಮ್ಮ "ಗಾದಿ"ಯನ್ನಾದರೂ ಉಳಿಸಿಕೊಳ್ಳುವದಕ್ಕಾಗಿ ಪ್ರಜೆಗಳನ್ನು ಸಾಧ್ಯವಾದಷ್ಟು ಸಂತೋಷಗೊಳಿಸಲು ಸಿದ್ಧರಾದಂತೆ ತೋರುತ್ತದೆ. ಇಲ್ಲದಿದ್ದರೆ ಸಾರ್ವಜನಿಕ ರೋಷಕ್ಕೆ ಪಾತ್ರವಾದ ಸಿಂಹಾಸನಗಳು ಬ್ರಿಟಿಶ ಸಂರಕ್ಷಣೆಯ ಅವಲಂಬನ ತಪ್ಪಿ ತತ್ತರಿಸಿ ನಡುಗದಿರವು.

## ಸೀಖರ ವಿರೋಧ

"ಪಾಕಿಸ್ತಾನ" ಪ್ರಾಂತಗಳ ಕಾಂಗ್ರೆಸ್ ಮತ್ತು ಇತರ ಪ್ರಗತಿಗಾಮಿ ಸಂಸ್ಥೆಗಳು ತಮ್ಮನ್ನು ಒತ್ತಾಯದಿಂದ ಯಾವುದೇ ಗುಂಪಿಗೆ ಸೇರಿಸುವದನ್ನು ಪ್ರತಿಭಟಿಸುವ ಎತ್ತುಗಡೆ ನಡೆಸಿವೆ. ಆದರೂ ಬ್ರಿಟಿಶ ಯೋಜನೆಯನ್ನು ಖಂಡಿತವಾಗಿ ಎದುರಿಸಲು ಪಂಜಾಬದ ಸೀಖರಷ್ಟು ಸಾಟೋಪವಾಗಿ ಕಣಕ್ಕಿಳಿದ ಗುಂಪು ಬೇರೊಂದಿಲ್ಲ. ಘಟನಾಸಮಿತಿಯಲ್ಲಿ ಕೇವಲ ನಾಲ್ಕು ಸ್ಥಾನಗಳಿಗೆ ಬಾಧ್ಯವಾದ ಈ ಕ್ಷಾತ್ರ ಜಾತಿ ಉತ್ತೇಜಿತವಾಗಿ ಎದ್ದುನಿಂತಿದೆ. ಬ್ರಿಟಿಶ ಯೋಜನೆಯನ್ನು ವಿರೋಧಿಸುವಲ್ಲಿ ಸೀಖ ಪಂಗಡಗಳೆಲ್ಲವೂ ಒಂದಾದಂತೆ ತೋರುತ್ತದೆ. ತಾ. ೧ ಕ್ಕೆ ಅಮೃತಸರದ ತೇಜಸಿಂಗ ಸಮುಂದ್ರಿ ಭವನದಲ್ಲಿ ಸೇರಿದ ಪಾಂಥಿಕ ಪರಿಷತ್ತಿನಲ್ಲಿ ರಾಯಭಾರದ ಯೋಜನೆಯವಿರುದ್ಧ ಕೊನೆಯ ಬಿಂದು ರಕ್ತವಿರುವವರೆಗೂ ಹೋರಾಡುವ ನಿರ್ಧಾರ ಮಾಡಿದರು. ಅದಕ್ಕಾಗಿ ಎರಡು ಲಕ್ಷ ಸೀಖ ಸ್ವಯಂಸೇವಕರನ್ನು ಸಿದ್ಧಗೊಳಿಸಲು ಅವರು ನಿಶ್ಚಯಿಸಿದ್ದಾರೆ. ಅವರ ಈ ಹೋರಾಟದ ನಿರ್ಧಾರ ಬರಿ ಹುಸಿಗುಂಡಾಗಿರುವಂತೆ ತೋರುವದಿಲ್ಲ. ಅದು ಅವರಿಗೊಂದು ಧರ್ಮಯುದ್ಧದ ಸ್ವರೂಪ ತಳೆದಂತಿದೆ. ಜತ್ಥೇದಾರ ಉತ್ತಮ ಸಿಂಗ ಎಂಬವರನ್ನು ಹೋರಾಟದ ಮೊದಲನೆ ಸರ್ವಾಧಿಕಾರಿಯಾಗಿ ಆರಿಸಲಾಗಿದೆ. ಎಲ್ಲ ಸೀಖ ಪಂಗಡಗಳ ಸಂಯುಕ್ತ ಕ್ರಿಯಾ ಸಮಿತಿ ರಚಿಸಲ್ಪಟ್ಟಿದೆ. ಸೀಖರ ಧರ್ಮಪೀಠವಾದ ಅಕಾಲಿ ತಖ್ತದ ಮುಂದೆ ಜತ್ಥೇದಾರ ಮೋಹನಸಿಂಗರು ಬಲಿದಾನದ ಪ್ರತಿಜ್ಞೆ ಕೈಕೊಂಡಾಗ ಎರಡು ಲಕ್ಷ ಪ್ರೇಕ್ಷಕರು ನೆರೆದಿದ್ದರು.

## ಎಡಪಕ್ಷದ ವಿರೋಧ

ಈಗ ಬಹಳ ಮಟ್ಟಿಗೆ ಕಾಂಗ್ರೆಸ್ಸಿನ ಎಲ್ಲ "ಎಡ" ಮುಂದಾಳುಗಳೂ ಬಿಡುಗಡೆ ಹೊಂದಿರುವದರಿಂದ ಅವರು ತಮ್ಮ ಅಭಿಪ್ರಾಯವನ್ನು ಹೆಚ್ಚು ಗಟ್ಟಿಯಾಗಿ ಉಸುರತೊಡಗಿದ್ದಾರೆ. ಬ್ರಿಟಿಶ ಸೂಚನೆಗಳನ್ನು ಕಾಂಗ್ರೆಸು ನಿರಾಕರಿಸಿಬಿಡಬೇಕೆಂದು ಶ್ರೀಮತಿ ಅರುಣಾ ಆಸಫ ಅಲ್ಲಿ, ಜಯಪ್ರಕಾಶ, ಅಚ್ಯುತ ಪಟವರ್ಧನ, ರಾಮಮನೋಹರ ಲೋಹಿಯಾ ಅವರು ಒಂದು ಪ್ರಕಟನೆಯ ಮೂಲಕ ವಿನಂತಿ ಮಾಡಿಕೊಂಡಿದ್ದಾರೆ. ನಮ್ಮನ್ನು ಹೆಜ್ಜೆ ಹೆಜ್ಜೆಗೂ ಆತಂಕಪಡಿಸಿದ ಜನರೊಡನೆ ಕೆಂಸಬಾರದು. ಬ್ರಿಟಿಶ ಯೋಜನೆಯಲ್ಲಿ ಸ್ವಾತಂತ್ರ್ಯದ ತತ್ವವಿಲ್ಲ. ಬ್ರಿಟಿಶ ಸ್ವಾರ್ಥಗಳನ್ನು ಅಪ್ರತ್ಯಕ್ಷವಾಗಿ ಶಾಶ್ವತಗೊಳಿಸುವ ಹೊಂಚು ಅದು. ಘಟನಾಸಮಿತಿಯ ಕಾರ್ಯ ಆರಂಭವಾಗುವ ಮೊದಲೇ ಬ್ರಿಟಿಶ ಪ್ರಭುತ್ವದ ಕುರುಹೆಲ್ಲ ಅಳಿಯಬೇಕು. ಬ್ರಿಟಿಶ ಸೈನ್ಯ, ವಾಯಿಸರಾಯ ಎಲ್ಲ ಹೋಗಬೇಕು ಎಂದು ಅವರು ಸಾರಿದ್ದಾರೆ.

## ನರೇಂದ್ರರ ಭವಿತವ್ಯ

ಫರೀದಕೋಟೆ ಮತ್ತು ಕಾಶ್ಮೀರ ಸಂಸ್ಥಾನಗಳಲ್ಲಿ ನಡೆದ, ನಡೆದಿರುವ ದಬ್ಬಾಳಿಕೆ, ಹತ್ಯಾಕಾಂಡಗಳು ನರೇಂದ್ರರ ಸಮಸ್ಯೆಯನ್ನು ಮತ್ತೊಮ್ಮೆ ಬಟ್ಟಬಯಲಿಗೆ ತಂದಿವೆ. ಹೊಸದಿಲ್ಲಿಯಲ್ಲಿ ಈ ವಾರ ನಡೆದ ಅ. ಭಾ. ಸಂಸ್ಥಾನಿ ಪ್ರಜಾಪರಿಷತ್ತಿನಲ್ಲಿ ಈ ಸಮಸ್ಯೆಗಳು ಚರ್ಚಿಸಲ್ಪಟ್ಟವು. ಪರಿಷತ್ತಿನಲ್ಲಿ ಉಪಾಧ್ಯಕ್ಷರಾದ ಕಾಶ್ಮೀರದ ಶೇಖ ಅಬ್ದುಲ್ಲಾ ಅವರನ್ನು ಕಾಶ್ಮೀರ ಸರಕಾರ ಬಂಧಿಸಿದ್ದರಿಂದ ಸಭೆಯಲ್ಲಿ ತ್ವೇಷದ ವಾತಾವರಣವಿತ್ತು. ಪಂಡಿತ ಜವಾಹರಲಾಲ ಮತ್ತು ಸರದಾರ ಪಟೇಲರು ಪರಿಷತ್ತಿನಲ್ಲಿ ಭಾಷಣ ಮಾಡಿದರು. ಜವಾಹರಲಾಲರು ಸಂಸ್ಥಾನಗಳ ಸಮಸ್ಯೆಯನ್ನು ಪ್ರಸ್ತಾಪಿಸಿ ಸಂಸ್ಥಾನಗಳ ನರೇಂದ್ರರ ಆಶ್ರಯದಲ್ಲಿಯೇ ಹೊಣೆಗಾರ ಸರಕಾರ ಸ್ಥಾಪಿಸುವದು ಪರಿಷತ್ತಿನ ಉದ್ದೇಶವೆಂದು ಮತ್ತೆ ಸಾರಿದರು. ಪ್ರಜೆಗಳು ನರೇಂದ್ರರನ್ನು ಘಟನಾತ್ಮಕ ವರಿಷ್ಠರಾಗಿ ಸ್ವೀಕರಿಸುವರು. ಆದರೆ ನಿಜವಾದ ಸಾರ್ವಭೌಮತ್ವ ನೆಲಸಿರುವದು ಪ್ರಜೆಗಳ ಕೈಯಲ್ಲಿಯೇ ಹೊರತು ಯಾವದೇ ವ್ಯಕ್ತಿಯಲ್ಲಲ್ಲ. ಈ ವರೆಗೆ ಬ್ರಿಟಿಶರ ಬಲದಿಂದ ನರೇಂದ್ರರು ಪ್ರಜಾಪೀಡನೆ ನಡೆಸಿದ್ದುಂಟು. ಆದರೆ ಬ್ರಿಟಿಶರು ಹೊರಟೆದ್ದು ಹೋದ ನಂತರ ಈ ಸಂಸ್ಥಾನಿಕರು "ಸ್ವತಂತ್ರ" ರಾಗುವರು. ಆಗ ಅವರ "ಸ್ವಾತಂತ್ರ್ಯ" ಯಾರ ಬಲದಿಂದ ಬಾಳುವದೋ ನೋಡಬೇಕೆಂದು ಮೊದಲಾಗಿ ಹೇಳಿ ಸಂಸ್ಥಾನಗಳ ಆಡಳಿತೆಯನ್ನು ಇತರ ಪ್ರಾಂತಗಳ ಆಡಳಿತ ಮಟ್ಟಕ್ಕೆ ತರಬೇಕಾದ್ದು ಅವಶ್ಯವೆಂದು ಸಾರಿದರು. ಸರದಾರ ಪಟೇಲರು ನರೇಂದ್ರರ ಪ್ರತಿಗಾಮಿ ಬುದ್ಧಿಯನ್ನು ಟೀಕಿಸಿ ಅಖಿಲ ಭಾರತದಲ್ಲಿ ಎಲ್ಲ ಸಂಸ್ಥಾನಗಳಲ್ಲಿ ಹೊಣೆಗಾರ ಆಡಳಿತೆಗಾಗಿ ಒಮ್ಮೆಲೆ ಚಳವಳಿ ಹೂಡಲಾಗುವದೆಂದೂ ಅವರೆಗೆ ಸಂಸ್ಥಾನಿ ಪ್ರಜೆಗಳು ಪ್ರತ್ಯೇಕವಾಗಿ ಹೋರಾಡಿ ಸತ್ವನಾಶ ಮಾಡಿಕೊಳ್ಳಬಾರದೆಂದೂ ಸಾರಿದರು. ೧೨ ತಿಂಗಳಲ್ಲಿ "ಏಕಾಧಿಪತ್ಯ"ವನ್ನು ಮುಗಿಸುವ ನರೇಂದ್ರ ಮಂಡಲದ ಆಶ್ವಾಸನ ಪೂರೈಸಲ್ಪಟ್ಟರೆ ಈ ಹೋರಾಟ ಅವಶ್ಯವಾಗಲಿಕ್ಕಿಲ್ಲ. ಇಲ್ಲದಿದ್ದರೆ ನರೇಂದ್ರರ ಭವಿತವ್ಯವನ್ನೇ ಗಂಡಾಂತರಕ್ಕೆ ಗುರಿಮಾಡುವ ಹೋರಾಟ ಒದಗದಿರದು. ಪ್ರಜಾಪರಿಷತ್ತು ಘಟನಾ ಸಮಿತಿಗೆ ಸಂಸ್ಥಾನಿ ಪ್ರಜೆಗಳೇ ಪ್ರತಿನಿಧಿಗಳನ್ನು ಆರಿಸಬೇಕೆಂಬಾಶಯದ ಗೊತ್ತುವಳಿ ಮಾಡಿದರು.

# ಅಂತರ್ ರಾಷ್ಟ್ರೀಯ

## ರಶಿಯಾ-.-ಆರಾಧನೆ

ಕಳೆದ ವಾರ ಪ್ರಧಾನಮಂತ್ರಿ ಅಟ್ಲಿಯವರು "ರಶಿಯನ್ ಮಿತ್ರರ ಮನಸ್ಸನ್ನು ತಿಳಿದುಕೊಳ್ಳುವದೇ ದುಸ್ತರವಾಗಿದೆ'' ಯೆಂದರು. ಬೆವಿನ್ನರು ರಶಿಯನ್ ವಿದೇಶಮಂತ್ರಿ ಮಲಟೋವರನ್ನು ಟೀಕಿಸಿ "ತಮಗೊಪ್ಪಿಗೆಯಾಗಿದ ಸೂಚನೆಗಳನ್ನು ನಾವು ಮುಂದಿಟ್ಟರೆ ಅದು ತಮ್ಮ ಮೇಲೆ ಅಧಿಕಾರ ತೋರಿಸಿದಂತೆ ಎಂಬ ಮಾಲಟೋವರ ಭಾವನೆಯನ್ನು ಕಂಡು ನನಗೆ ತುಸು ಸಂತಾಪವಾಗುತ್ತದೆ" ಎಂದರು. "ರಶಿಯನ್ ಪದ್ಧತಿಯೇ ನಿಜವಾದ ಪ್ರಜಾತಂತ್ರ ಉಳಿದುದೆಲ್ಲ ಫ್ಯಾಸಿಝಂ'' ಎಂಬ ರಶಿಯನ್ ಮನೋವೃತ್ತಿಯೂ ಅವರಿಗೆ ಒಗ್ಗಲಿಲ್ಲ. ಆದರೂ ರಶಿಯನ್ನರ ಸಹಕಾರ ಹೊರತು ಪರಿಸ್ಥಿತಿ ಸುಧಾರಿಸುವದು ಸಾಧ್ಯವಿಲ್ಲವೆಂಬ ಮಾತು ಅವರಿಗೆಲ್ಲ ಮನವರಿಕೆಯಾಗದೆ ಇದ್ದಿಲ್ಲ. ಮಲಟೋವರು ರಶಿಯಾವನ್ನು ಮೂಲೆಗುಂಪು ಮಾಡುವ ಮತ್ತು ಅದರ ಮೇಲೆ ಅಧಿಕಾರ ದರ್ಪ ತೋರುವ ಬ್ರಿಟಿಶ ಪ್ರವೃತ್ತಿಯನ್ನು ಖಂಡಿಸುವದಕ್ಕೆ ತಡೆಮಾಡಿಲ್ಲ. ಬೆವಿನ್ನರ ಭಾಷಣ ಜಗತ್ತಿನ ಶಾಂತಿಗೆ ಪೋಷಕವಲ್ಲವೆಂದು ಮಾಸ್ಕೋ ಪತ್ರಿಕೆಗಳು ಸಾರಿವೆ. ಪ್ಯಾರಿಸಿನಲ್ಲಿ ಇದೀಗ ಪುನಃ ಪ್ರಾರಂಭವಾಗಲಿರುವ ಚತುರ್‍ರಾಷ್ಟ್ರ ವಿದೇಶಮಂತ್ರಿಗಳ ಪರಿಷತ್ತು ಒಪ್ಪಂದಕ್ಕೆ ಬರಲು ಅಸಮರ್ಥವಾದರೆ ಬಹಳ ಅಪಾಯವುಂಟೆಂದು ಅಮೇರಿಕನ ವಿದೇಶಮಂತ್ರಿ ಬಾಯರ್ನ್ಸರು ಒಂದು ಪತ್ರಿಕಾ ಪರಿಷತ್ತಿನಲ್ಲಿ ಹೇಳಿದರು. ಅವರಿಗೆ ನಿರಾಶೆಯಾಗಿಲ್ಲವಂತೆ. ಆದರೂ ಮಹಾತ್ಮಾ ಗಾಂಧಿಯವರ ಹಾಗೆಯೆ ಅವರಿಗೂ "ಪ್ರಾರ್ಥನೆಯ ಅವಶ್ಯಕತೆ" ಅನಿಸತೊಡಗಿದೆಯಂತೆ. ಹೀಗಾಗಿ ಸ್ಟಾಲಿನ್ನರ ಮನ ಒಲಿಸುವ ಸಲುವಾಗಿ ಅಧ್ಯಕ್ಷ ಟ್ರೂಮನ್ನರು ವಿಶೇಷ ದೂತನೊಬ್ಬನನ್ನು ಮಾಸ್ಕೋಕ್ಕೆ ಕಳಿಸುವವರಿದ್ದಾರೆ. ಬ್ರಿಟಿಶ ಸರಕಾರ ಅಂಥದೇನನ್ನೂ "ಅಧಿಕೃತ"ವಾಗಿ ಮಾಡುವ ಲಕ್ಷಣವಿಲ್ಲದಿದ್ದರೂ ಬ್ರಿಟಿಶ ಕೂಲಿಕಾರ ಪಕ್ಷದವರು "ಒಂದು ಸೌಹಾರ್ದ ಶಿಷ್ಟಾಯಿ''ಯನ್ನು ಮಾಸ್ಕೋಕ್ಕೆ ಕಳುಹಿಸಿ ಬ್ರಿಟಿಶ ವಿಚಾರಗಳನ್ನು ಸೋವಿಯೆಟ್ಟರಿಗೆ ಪರಿಚಯ ಮಾಡಿಕೊಡಲಿರುವರು. ಇದಕ್ಕೆ ಮಾಸ್ಕೋದ ಭಾಗ್ಯವಿಧಾತರು ದಯಮಾಡಿ ಅಪ್ಪಣೆ ಕೊಟ್ಟಿದ್ದಾರೆ. ಬ್ರಿಟಿಶ ಕೂಲಿಕಾರ ಮಹಾಮಂಡಲದ ಅಧ್ಯಕ್ಷ ಪ್ರೊ. ಲಾಸ್ಕಿಯವರು ರಶಿಯಾದ ಭಯವನ್ನು ನೀಗಿಸುತ್ತ ಬ್ರಿಟಿಶ ಕೂಲಿಕಾರ ಯಾವಾಗಲೂ ಸೋವಿಯೆಟ್ಟಿನ ಬೆಂಬಲಕ್ಕಿದ್ದಾನೆಂದು ಸಾರಿದರು. ಬೇವಿನ್ನರ ವಿದೇಶ ಧೋರಣವನ್ನು ಟೀಕಿಸಿ ಲಾಸ್ಕಿಯವರು ರಾಯಭಾರಿ ವರ್ಗಗಳಲ್ಲಿ ಇನ್ನೂ ಹಳೆ ಸಾಂಪ್ರದಾಯಿಕ ಪ್ರತಿಗಾಮಿಗಳನ್ನು ಇಟ್ಟುಕೊಂಡದ್ದೇ ಈ ಸಂಶಯಗಳಿಗೆ ಕಾರಣವಾಗಿದೆಯೆಂದು ಸಾರಿ "ಸಂಶಯದ ಧೋರಣೆಯಿಂದ ಕೆಲಸ ಸಾಧಿಸಲಿಲ್ಲವೆಂದ ಮೇಲೆ ಇನ್ನು ವಿಶ್ವಾಸದ ಧೋರಣವನ್ನು ಅವಲಂಬಿಸಿ ನೋಡೋಣ"ವೆಂದು ಪದೇಶಿಸಿದರು. "ರಶಿಯನ್ ಮಿತ್ರರ ಮನಸ್ಸಿನಲ್ಲಿರುವದೇನು" ಎಂದು ಅಟ್ಲಿಯವರಿಗೆ ತಿಳಿಯದಿದ್ದರೂ ಲಾಸ್ಕಿಯವರಿಗೆ ತಿಳಿದಂತಿತ್ತು. ಅವರು ಪರಮಾಣು ಬಾಂಬಿನ ಗುಟ್ಟೇ ರಶಿಯನ್ನರನ್ನು ಕೆರಳಿಸಿದೆಯೆಂದು ಹೇಳಿದರು. ಇದರಿಂದಲೆಯೋ ಏನೊ ಅಮೇರಿಕನ್ ಸರ್ಕಾರದವರು ಪರಮಾಣು ಶಕ್ತಿಯನ್ನು ಸ್ವಲ್ಪ ಸ್ವಲ್ಪವಾಗಿ ಹೊರಗೆಡಹುವ ಮತ್ತು ಅದರ ನಿಯಂತ್ರಣವನ್ನು ಅಂತರ್‌ರಾಷ್ಟ್ರೀಯ ಅಧಿಕಾರಕ್ಕೊಪ್ಪಿಸುವ ಯೋಜನೆಯೊಂದನ್ನು ಸಿದ್ಧಗೊಳಿಸಿದ್ದಾರೆಂದು ಸಾರಲಾಗಿದೆ. ಇವೆಲ್ಲವುಗಳಿಂದ ರಶಿಯನ್ ಸಂಶಯ ದೂರವಾಗಿ ಮುಂಬರುವ ವಿದೇಶಮಂತ್ರಿಗಳ ಅಧಿವೇಶನದಲ್ಲಿ ಯುರೋಪಿಯನ್ ಶಾಂತಿಯ ಒಪ್ಪಂದವಾಗುವದೇನೋ ನೋಡಬೇಕು.

## ಅಧ್ಯಕ್ಷ ಕೆಲಿನಿನ್ನರ ಮೃತ್ಯು

ರಶಿಯಾದ ವರಿಷ್ಠ ಸೋವಿಯೆಟ್ಟಿನ ಅಧ್ಯಕ್ಷರೂ ಬಹುಕಾಲದಿಂದ ಸೋವಿಯೆಟ ಮಂತ್ರಿಮಂಡಲದ ಸದಸ್ಯರೂ ಆಗಿದ್ದು ಈಚೆಗೆ ಅನಾರೋಗ್ಯದಿಂದಾಗಿ ನಿವೃತ್ತರಾಗಿದ್ದ ಮಿಕಾಯೆಲ ಕೆಲಿನಿನ್ನರ ಮರಣದಿಂದ ಜ್ಞಾನ-ವಯೋವೃದ್ಧ ಕಮ್ಯುನಿಷ್ಟನೊಬ್ಬನನ್ನು ರಶಿಯಾ ಕಳೆದುಕೊಂಡಿದೆ. ರಶಿಯಾದಲ್ಲಿ ಜರಗಿದ ಅನೇಕಾನೇಕ ಉಚ್ಚಾಟನೆಗಳಲ್ಲಿ ಪಾರಾಗಿಉಳಿದುಕೊನೆಯವರೆಗೂಪದವಿಯನ್ನು ಭೋಗಿಸಿದ ಕೆಲವೇ ಹಳೇ ಕಮ್ಯುನಿಸ್ಟರಲ್ಲಿ ಕೆಲಿನಿನ್ನರೂ ಒಬ್ಬರು. ಕೆಲಿನಿನ್ನರ ಅಂತ್ಯವಿಧಿ ಸಮಸ್ತ ಸರಕಾರಿ ಮಾನಮರ್ಯಾದೆಗಳಿಂದ ಸಾಂಗವಾಯಿತು ಸ್ಟಾಲಿನ್ನರೂ ಮಲಟೋವರೂ ಅವರ ಶವವನ್ನು ಸ್ವತಃ ಹೊತ್ತರು. ಲೆನಿನ್ನರ ಅಂತ್ಯವಿಧಿಯ ನಂತರ ಮಾಸ್ಕೋದಲ್ಲಿ ಇದೇ ಅತಿ ವಿಜೃಂಭಣೆಯ ಸ್ಮಶಾನಯಾತ್ರೆಯಾಗಿತ್ತು.

## ಮನೆತನವೊಂದರ ಕೊನೆ

ಕಳೆದ ತಿಂಗಳಲ್ಲಿ ಪದತ್ಯಾಗ ಮಾಡಿದ ಇಟಲಿಯ ಅರಸ ವಿಕ್ಟರ ಇಮಾನ್ಯುಯೆಲ್ಲನ ಮಗ ರಾಜಕುಮಾರ ಅಂಬರ್ಟೋನ ೨೯ ದಿನಗಳ ಆಳಿಕೆಯ ನಂತರ ಈಗ ಸೆವಾಯ ಮನೆತನದ ಅಂತ್ಯವಿಧಿಯಾದಂತಾಯಿತು. ಅವನ ತಂದೆ ಪದತ್ಯಾಗ ಮಾಡಿದಾಗ ಮನೆತನದ ಆಳಿಕೆಯನ್ನಾದರೂ ಉಳಿಸುವ ಆಸೆಯಿಂದ "ಅರ್ಧಂ ತ್ಯಜತಿ ಪಂಡಿತಃ'' ಎಂಬ ನ್ಯಾಯವನ್ನು ಅನುಸರಿಸಿದ್ದ. ಆದರೆ ಈಗ ಆ ಉಳಿದ ಅರ್ಧವನ್ನೂ ಇಟಲಿಯ ಜನತೆ ಕಸಿದುಕೊಂಡಿದೆ. ಹಿಂದಿನ ವಾರ ಇಟಲಿಯಲ್ಲಿ ಅರಸೊತ್ತಿಗೆ ಬೇಕೇ ಪ್ರಜಾರಾಜ್ಯ ಬೇಕೇ ಎಂಬ ಬಗ್ಗೆ ಜನಾಭಿಪ್ರಾಯವನ್ನು ಸಂಗ್ರಹಿಸಲಾಯಿತು. ೧೨॥ ದಶಲಕ್ಷಕ್ಕೂ ಮೀರಿ ಮತಗಳು ಅರಸೊತ್ತಿಯ ವಿರುದ್ಧ ಪ್ರಜಾರಾಜ್ಯದ ಪರವಾಗಿ ಬಿದ್ದರೆ ಅರಸೊತ್ತಿಗೆ ಉಳಿಯಬೇಕೆಂದು ೧೦ ದಶಲಕ್ಷದಷ್ಟು ಮತಗಳು ಮಾತ್ರ ಬಿದ್ದವು. ಇಟಲಿಯ ವರಿಷ್ಠ ನ್ಯಾಯಾಲಯದವರು ಈ ಪರಿಣಾಮವನ್ನು ಸಾರಿದರು. ಆದರೆ ೨೯ ದಿನಗಳ ರಾಜ ಅಂಬರ್ಟೋ ಸರಳವಾಗಿ ಅಧಿಕಾರ ಬಿಟ್ಟುಕೊಡುವಂತೆ ಕಾಣುವದಿಲ್ಲ. ವರಿಷ್ಠ ನ್ಯಾಯಾಲಯ ಈ ಪರಿಣಾಮವನ್ನು ಸಾರಿದ್ದು ಮಾತ್ರ ಸಾಲದು. ಸ್ಫುಟವಾಗಿ ಪ್ರಜಾರಾಜ್ಯ ಸ್ಥಾಪಿಸಲಾಗಿದೆಯೆಂದು ಸಾರುವ ವರೆಗೆ ತಾನು ಪದತ್ಯಾಗ ಮಾಡಲಾರೆನೆಂದು ಅವನು ಹಟ ಹಿಡಿದಿರುವದರಿಂದ ಮಂತ್ರಿಮಂಡಲಕ್ಕೂ ಅವನಿಗೂ ತಿಕ್ಕಾಟವುಂಟಾಗಿದೆ. ಈ ನಡುವೆ ರಾಜಭಕ್ತ ಪಕ್ಷದವರು ಅಲ್ಲಲ್ಲಿ ಪ್ರದರ್ಶನ, ದಂಗೆಗಳನ್ನು ನಡೆಸಿದ್ದಾರೆ. ಇನ್ನೊಮ್ಮೆ ಮತಗಣನೆಯಾಗಬೇಕೆಂದೂ ಕೆಲವರು ಸಾಧಿಸತೊಡಗಿರುವರು. ಆದರೆ ಈ ಮತಗಣನೆ ಶಾಂತತೆಯಿಂದ ನಿರ್ದುಷ್ಟವಾಗಿ ನಡೆದಿತ್ತೆಂಬುದನ್ನು ಬ್ರಿಟಿಶ ವಿದೇಶ ಮಂತ್ರಿಗಳೇ ಒಪ್ಪಿದ್ದಾರೆ. ಅಂದಮೇಲೆ ಅಂಬರ್ಟೋನ ಮತ್ತು ಅವನ ಬೆಂಬಲಿಗರ ಈ ಹಟ ಬಹಳ ದಿನ ತಾಳಲಿಕ್ಕಿಲ್ಲ. ಬೇಗನೆ ಅವನು ದೇಶಬಿಟ್ಟು ಹೋಗಬಹುದು.

ಇಟಲಿಯ ಸೆವಾಯ ಮನೆತನಕ್ಕೆ ೧೮೬೧ ರಲ್ಲಿ ಇಟಲಿಯ ರಾಜಪದವಿ ಲಭಿಸಿತು. ೮೫ ವರ್ಷಗಳ ನಂತರ ಅದರ ಕೊನೆಯೀಗ ಆಗಿದೆ.

## ಫ್ರೆಂಚ ಚುನಾವಣೆಗಳು

ಒಂದೇ ಶಾಸನ ಸಭೆಯುಳ್ಳ ರಾಜ್ಯಘಟನೆಯ ವಿರುದ್ಧ ಫ್ರಾನ್ಸದ ಜನತೆ ಮತವಿತ್ತನಂತರ ಆ ಘಟನೆಗೆ ಕಾರಣವಾದ ಘಟನಾ ಸಮಿತಿಯನ್ನು ವಿಸರ್ಜಿಸಿ ಹೊಸ ರಾಜ್ಯಘಟನಾ ಸಮಿತಿಯನ್ನು ನೇಮಿಸಲು ಫ್ರಾನ್ಸದಲ್ಲಾದ ಚುನಾವಣೆಗಳ ಪರಿಣಾಮ ಕೆಲವಂಶಗಳಲ್ಲಿ ಮನನೀಯವಾಗಿದೆ. ಕಳೆದ ಚುನಾವಣೆಗಳಂತೆಯೆ ಎಂ. ಆರ್. ಪಿ. (ಕ್ಯಾಥೋಲಿಕ ಪಕ್ಷ), ಕಮ್ಯುನಿಸ್ಟ್ ಮತ್ತು ಸಾಮ್ಯವಾದಿ ಪಕ್ಷಗಳೇ ಪ್ರಬಲವಾಗಿ ತೋರಿಬಂದರೂ ಈ ಪಕ್ಷಗಳ ಪರಸ್ಪರ ಶಕ್ತಿಯಲ್ಲಿ ಮಾತ್ರ ಸ್ವಲ್ಪ ಏರಿಳಿತವಾಗಿದೆ. ಕಳೆದ ಚುನಾವಣೆಗಳಲ್ಲಿ ಮೂರನೆಯ ಸ್ಥಾನಪಡೆದಿದ್ದ ಎಂ. ಆರ್. ಪಿ. ಯೇ ೧೬೦ ಸ್ಥಾನಗಳನ್ನು ಪಡೆದು ಈ ಬಾರಿ ಅತಿ ದೊಡ್ಡ ಪಕ್ಷವಾಗಿ ಆರಿಸಿ ಬಂದಿದೆ. ಕಮ್ಯುನಿಸ್ಟರು ಮೊದಲನೆ ಸ್ಥಾನದಿಂದ ತಳ್ಳಲ್ಪಟ್ಟು ಎರಡನೆಯದಕ್ಕಿಳಿದಿದ್ದಾರೆ. (ಬಲ: ೧೪೬ ಸ್ಥಾನಗಳು) ಸಾಮ್ಯವಾದಿಗಳು ೧೪೫ ಸ್ಥಾನಗಳನ್ನು ಪಡೆದು ಮೂರನೆಯವರಾಗಿಬಿಟ್ಟಿದ್ದಾರೆ. ಎರಡು ಶಾಸನ ಸಭೆಗಳು (ಸಿನೇಟ ಮತ್ತು ಅಸೆಂಬ್ಲಿ) ಇರಬೇಕೆಂದು ಹಿಂದಿನ ಬಾರಿ ಹಟ ಹಿಡಿದಿದ್ದ ಪಕ್ಷವೆಂದರೆ ಎಂ. ಆರ್. ಪಿ. ಫ್ರೆಂಚ್ ಜನರು ಮತಗಣನೆಯಲ್ಲಿ ಕಮ್ಯುನಿಸ್ಟ-ಸಾಮ್ಯವಾದಿಗಳಿಬ್ಬರ ಬಯಕೆಯ ಏಕಶಾಸನ ಸಭಾತ್ಮಕ ಘಟನೆಯನ್ನು ತಿರಸ್ಕರಿಸಿದ ನಂತರ ಎಂ. ಆರ್. ಪಿ. ಯ ವಿಜಯ ಆಶ್ಚರ್ಯಕರವಾಗಿರಬೇಕಿದ್ದಿಲ್ಲ. ಆದರೆ ಧರ್ಮವಾದಿ ಎಂ ಆರ್. ಪಿ. ಯವರು ಧರ್ಮವೈರಿ ಕಮ್ಯುನಿಸ್ಟರ ಸ್ಥಾನವನ್ನು ಫ್ರೆಂಚ ರಾಜಕಾರಣದಲ್ಲಿ ಆಕ್ರಮಿಸಿದ್ದು ಅರ್ಥಪೂರ್ಣವಾಗಿದೆ. ಚುನಾವಣೆಯ ಮುಂಚೆ ಪೋಪ ಗುರುಗಳು ಒಂದು ವಿನಂತಿ ಹೊರಡಿಸಿದ್ದು ಇದಕ್ಕೆ ಸಹಕಾರಿಯಾಗಿರಬಹುದು.

ಅದು ಹೇಗೇ ಇರಲಿ ಫ್ರೆಂಚ ರಾಜಕಾರಣದಲ್ಲಿ ಯಾವುದೇ ಒಂದು ಪಕ್ಷಕ್ಕೆ ನಿಚ್ಚಳ, ಏಕೆ, ಸಮೀಪ ಬಹುಮತವಿಲ್ಲದಿರುವದು ಫ್ರೆಂಚ ಸರಕಾರದ ಸ್ಥಿರತೆಗೆ ಪೋಷಕವಲ್ಲೆಂದು ಹೇಳಬೇಕು. ಯಾವುವೇ ಎರಡು ಪಕ್ಷಗಳು ತಾತ್ಪೂರ್ತಿಕ "ಉಡಿಕೆ" ಮಾಡಿಕೊಂಡರೆ ಉಳಿದವುಗಳನ್ನು ಸೋಲಿಸಬಹುದು. ಸಾಮ್ಯವಾದಿಗಳಲ್ಲಿ ಯಾವಾಗಲೂ ಇದ್ದ ಚಾಂಚಲ್ಯದಿಂದ ಇನ್ನಾದರೂ ಯಾವುದೇ ಎರಡು ಪಕ್ಷಗಳು ದೀರ್ಘಕಾಲ ಒಂದಕ್ಕೊಂದು ಅಂಟಿಕೊಂಡು ರಾಜ್ಯಭಾರ ನಡೆಸುವದು ಸಂಭವವಿಲ್ಲವೆಂದು ತೋರುತ್ತದೆ. ಅನೇಕ ದಶಕಗಳಿಂದ ಫ್ರೆಂಚ ರಾಜಕಾರಣದಲ್ಲಿದ್ದ ಈ ಪಕ್ಷಗಳ ಸಮಬಲವೇ ಫ್ರಾನ್ಸದ ಅಧೋಗತಿಗೆ ಕಾರಣವಾಯಿತೆಂಬುದನ್ನು ಮರೆಯುವಂತಿಲ್ಲ.

## ಕಣ್ಮರೆಯಾದ ಮುಫ್ತಿ

ಫ್ರಾನ್ಸದ ಬೋಗಿವಲ್ ಗ್ರಾಮದಲ್ಲಿ ಈಗ ಯುದ್ಧ ತೀರಿದಂದಿನಿಂದ ಸ್ಥಾನಬದ್ಧತೆಯಲ್ಲಿದ್ದ ಪಾಲಿಸ್ತಾನದ ಗ್ರ್ಯಾಂಡ್ ಮುಫ್ತಿ, ಕಳೆದ ವಾರದಿಂದ ಸಹಸಾ ಕಣ್ಮರೆಯಾಗಿಬಿಟ್ಟಿದ್ದಾನೆ. ಜರ್ಮನಿಯೊಡನೆ ಸಹಕರಿಸಿದ್ದಕ್ಕಾಗಿ ಅವನನ್ನು ವಿಚಾರಣೆಗೆ ಗುರಿಪಡಿಸಬೇಕೆಂಬ ಕೂಗು ಕೇಳುತ್ತಿತ್ತು. ಆದರೆ "ಪಾರಿಭಾಷಿಕ ಅರ್ಥದಲ್ಲಿ ಅವನನ್ನು ಯುದ್ಧಾಪರಾಧಿಯೆಂದು ವಿಚಾರಣೆಗೆ ಗುರಿಪಡಿಸಬರುವದಿಲ್ಲ"ಂದು ಬ್ರಿಟಿಶ ನ್ಯಾಯ ಪಂಡಿತರ ಮತವಾಗಿದ್ದುದರಿಂದ ಬ್ರಿಟಿಶ ಸರಕಾರ ಮೀನ ಮೇಷ ಎಣಿಸುತ್ತಿತ್ತು. ಇದೀಗ ಅವನು ಪಾರಾಗಿ ಹೋದುದು ಸುಭಾಸ ಬೋಸರ ಕಣ್ಮರೆಯಷ್ಟೇ ಗಾಬರಿಯನ್ನು ಬ್ರಿಟಿಶ ವರ್ಗಗಳಲ್ಲಿ ಉಂಟು ಮಾಡಿದೆ. ಫ್ರೆಂಚ ವಿಮಾನವೊಂದರಲ್ಲಿ ಪಾರಾಗಿ ಅವನು ಸೀರಿಯಾಕ್ಕೆ ಮುಟ್ಟಿರುವನೆಂದು ಸುದ್ದಿ ಹಬ್ಬಿದೆ. ಇದು ನಿಜವಾದ ಪಕ್ಷದಲ್ಲಿ ಪಾಲಿಸ್ತಾನದ ಪರಿಸ್ಥಿತಿಯ ಮೇಲೆ ಅಗಾಧ ಪರಿಣಾಮವಾಗುವದರಲ್ಲಿ ಸಂದೇಹವಿಲ್ಲ. ಅಗ್ನಿಭಕ್ಷಕನಾದ ಈ ಮುಫ್ತಿ ಪಾಲಿಸ್ತಾನದ ಗಡಿಯಾಚೆ ಕುಳಿತನೆಂದರೆ ಅರಬರು ಹುರುಪಿನೆಂದದ್ದು ಯಹೂದ್ಯ ಪ್ರಶ್ನೆಯಲ್ಲಿ ಆಂಗ್ಲೋ ಅಮೇರಿಕನ್ನರನ್ನು ಪ್ರತಿಭಟಿಸದಿರರು. ಎಂಥೆಂಥ ಪ್ರಯತ್ನಗಳೂ ಅವನನ್ನು ಕಂಡು ಹಿಡಿಯುವಲ್ಲಿ ಈ ವರೆಗೆ ಯಶಸ್ವಿಯಾಗಿಲ್ಲ.

## ಪಾಲಿಸ್ತಾನದಲ್ಲಿ ಅತ್ಯಾಚಾರ

ಯಹೂದ್ಯ ಕಾಯಿದೆಬಾಹಿರ ಸಂಸ್ಥೆಯ ಚಟುವಟಿಕೆಗಳು ಪಾಲಿಸ್ತಾನದಲ್ಲಿ ಈಗ ಕೆಲ ದಿನಗಳಿಂದ ವಿಪರೀತ ಹೆಚ್ಚಿವೆ. ರೇಲ್ವೆ ಹಳಿಗಳನ್ನು ಕಿತ್ತುವದು, ರೇಲು ಗಾಡಿಗಳನ್ನು ಉರುಳಿಸುವದು ಅಖಂಡ ನಡೆದೇ ಇದೆ. ಈ ಭಯೋತ್ಪಾದಕ ಸಂಸ್ಥೆಯವರು ತೆಲ-ಅವೀವದಲ್ಲಿ ಮೊನ್ನೆ ಮೊನ್ನೆ ಹಚ್ಚಿದ ಭಿತ್ತಿಪತ್ರಗಳಲ್ಲಿ ಪಾಲಿಸ್ತಾನದಲ್ಲಿ ಸ್ವತಂತ್ರ ಯಹೂದ್ಯ ಸರಕಾರ ಸ್ಥಾಪಿಸಬೇಕು, ಬ್ರಿಟಿಶರೊಡನೆ ಅಸಹಕಾರ ಮಾಡಬೇಕು ಎಂದು ಯಹೂದ್ಯರಿಗೆ ಕರೆಕೊಡಲಾಗಿದೆ. ಅತ್ತ ಅರಬ ಲೀಗದವರಾದರೂ ಪಾಲಿಸ್ತಾನ ಪ್ರಶ್ನೆಯನ್ನು ಯುಕ್ತರಾಷ್ಟ್ರಗಳ ಮುಂದೆ ಮಂಡಿಸಲು ನಿರ್ಧರಿಸಿದ್ದು ಆ ಮೊದಲು ಬ್ರಿಟಿಶರನ್ನೊಮ್ಮೆ ಕೇಳಿಕೊಳ್ಳಬೇಕೆಂದಿದ್ದಾರೆ. ಅರಬರಿಂದ ಯಹೂದ್ಯರ ಕೈಗೆ ಭೂಮಿ ಮಾರಿಹೋಗದಂತೆ ತಡೆಯಲು ಅವರು ೧೦ ಲಕ್ಷ ಪೌಂಡ ಮಂಜೂರ ಮಾಡಿದ್ದಾರೆ. ಈ ಇಕ್ಕಟ್ಟಿನಲ್ಲಿ ಬ್ರಿಟಿಶರೊಡನೆ ಮಾತುಕತೆ ನಡೆಸಲು ಅಧ್ಯಕ್ಷ ಟ್ರೂಮನ್ನರು ತಮ್ಮ ಯುದ್ಧ, ವಿದೇಶ, ಅರ್ಥಮಂತ್ರಿಗಳ ಸಮಿತಿಯನ್ನು ನೇಮಿಸಿದ್ದಾರೆ.

## ಅರಸು ಆನಂದರ ದುರಂತ

ಸಿಯಾಮು ಅಥವಾ ಥಾಯಿಲಂಡದ ಯುವಕ ಅರಸನಾದ ಅನಂದ ಮಹೀದಲನು ತಾ. ೯ ಮಧ್ಯಾಹ್ನದ ಹೊತ್ತಿಗೆ ತನ್ನ ಅರಮನೆಯಲ್ಲಿ ಸತ್ತುಬಿದ್ದಿದ್ದು ಕಂಡುಬಂತು. ಅವನ ತಲೆಯಲ್ಲಿ ಗುಂಡಿನೇಟು ತೋರುತ್ತಿತ್ತು. ೨೦ ವರ್ಷದ ಈ ರಾಜನು ೧೨ ವರ್ಷಗಳಿಂದ ವಿದೇಶಗಳಲ್ಲಿದ್ದು ಸ್ವಿಝರ್ಲಂಡಿನಲ್ಲಿ ಶಿಕ್ಷಣ ಪಡೆಯುತ್ತಿದ್ದು ಕಳೆದ ಡಿಸೆಂಬರದಲ್ಲಿ ದೇಶಕ್ಕೆ ಮರಳಿದ್ದನು. ೧೯೩೫ ರಲ್ಲಿ ಅವನ ಕಕ್ಕನಾದ ಪ್ರಜಾಧಿಪೋಕ ರಾಜನು ಸಿಂಹಾಸನತ್ಯಾಗ ಮಾಡಿದ ನಂತರ ಆನಂದನು ಅರಸನಾಗಿದ್ದ. ಇನ್ನು ಕೆಲ ದಿನಗಳಲ್ಲಿಯೇ ಅವನು ಪುನಃ ವಿದೇಶಗಳಿಗೆ ವಿದ್ಯಾಭ್ಯಾಸಕ್ಕಾಗಿ ಹೊರಟುಹೋಗಬೇಕಾಗಿತ್ತು. ಈಗ ಸಿಯಾಂ ಶಾಸನ ಸಭೆಯ ನಿರ್ಣಯದಂತೆ ಆನಂದನ ೧೯ ವಯಸ್ಸಿನ ತಮ್ಮ ಫೂಮಿ ಫೋಮನು ಹೊಸ ರಾಜನೆಂದು ಸಾರಲಾಗಿದೆ.

ಆನಂದರು "ಆಕಸ್ಮಿಕ ಬಂದೂಕಿನ ಅಪಘಾತ" ದಿಂದ ಸತ್ತರೆಂದು ಹೇಳಲಾಗಿದೆ. ಅವರಿಗೆ ಕೆಲ ದಿನಗಳಿಂದ ಅಸ್ವಸ್ಥವಾಗಿತ್ತೆಂದೂ ಅರಮನೆಯವರು ಹೇಳುತ್ತಾರೆ. ಆನಂದರು ಪುನಃ ವಿದೇಶಕ್ಕೆ ಹೋಗಬಾರದೆಂದೊ ಹೋದರೆ ದೇಶದಲ್ಲಿ ಅಧಿಕಾರಕ್ಕಾಗಿ ಸೂತ್ರಚಾಲನೆ ನಡೆಯುವದೆಂದೂ ರಾಜನ ಹಿತೈಷಿಗಳು ಹೇಳುತ್ತಿದ್ದರಂತೆ. ೧೮೦ ಲಕ್ಷ ಪ್ರಜೆಗಳ ಅಧಿಪತಿಯಾದ ಈ ಅರಸನು ಅರಮನೆಯ ಆವಾರದಲ್ಲಿ ಒಂದು ಬಗೆಯಲ್ಲಿ ಬಂದಿಯಂತೆ ವಾಸಿಸುತ್ತಿದ್ದನು. ಹೊರಗೆ ಹೋಗಿ ಜನರಲ್ಲಿ ಬೆರೆಯುವ ಅಥವಾ ಸಂಪರ್ಕ ಬೆಳೆಸುವ ಅವಕಾಶವಾಗಲಿ ಪತ್ರಿಕಾ ಪ್ರತಿನಿಧಿಗಳನ್ನು ಕಾಣುವ ಸ್ವಾತಂತ್ರ್ಯವಾಗಲಿ ಅವನಿಗಿದ್ದಿಲ್ಲ. ಆನಂದನು ಸ್ವದೇಶಕ್ಕೆ ಮರಳಿದ ನಂತರ ಅವನು ಬಹಳ ಜನಪ್ರಿಯನಾಗತೊಡಗಿದ್ದನಂತೆ. ಹೇಗೇ ಇದ್ದರೂ ಈ ಮೃತ್ಯುವಿನ ಸಂಬಂಧದಲ್ಲಿ ಒಂದು ಗಹನವಾದ ವಾತಾವರಣವೇ ಕಲ್ಪಿಸಲ್ಪಟ್ಟಿದೆ.

## ಬ್ರಹ್ಮದೇಶದ ಸ್ವಾತಂತ್ರ್ಯಪಿಪಾಸೆ

ಬ್ರಹ್ಮದೇಶದ ಸ್ವಾತಂತ್ರ್ಯ ಪಿಪಾಸೆ ಉಕ್ಕೇರಿ ಹರಿಯತೊಡಗಿದೆ. ಸರಕಾರದ ಕರಾಳ ದಬ್ಬಾಳಿಕೆಯನ್ನು ಪ್ರತಿಭಟಿಸಲು ತಾ. ೭ಕ್ಕೆ ರಂಗೂನದಲ್ಲಿ ೫೦೦೦೦ ಜನರ ಪ್ರಚಂಡ ಮೆರವಣಿಗೆಯೊಂದು ಫ್ಯಾಸಿಸ್ಟ ವಿರೋಧಿ ಲೀಗದ ನೇತೃತ್ವದಲ್ಲಿ ಪ್ರದರ್ಶನ ನಡೆಸಿತು. ಮೆರವಣಿಗೆಯಲ್ಲಿ ಮಹಿಳೆಯರೂ ಬೌದ್ಧ ಭಿಕ್ಷುಗಳೂ ಇದ್ದರು. ಜನತಾ ಸ್ವಯಂ ಸೇವಕ ಸಂಸ್ಥೆಯ ಸದಸ್ಯರನ್ನು ಸರಕಾರದವರು ಬಂಧಿಸಿದ್ದು ಬಹಳ ತ್ವೇಷಕ್ಕೆ ಕಾರಣವಾಗಿದೆ. ಫ್ಯಾಸಿಸ್ಟ ವಿರೋಧಿ ನಾಯಕ ಜನರಲ್ ಅಂಗಸಾನರು "ಬ್ರಿಟಿಶರು ಶಾಂತ ರೀತಿಯಿಂದ ನಮ್ಮ ಬೇಡಿಕೆಗಳನ್ನು ಪೂರೈಸಿದರೆ ಹೋರಾಟ ಹೂಡಬೇಕೆಂಬ ಇಚ್ಛೆ ನಮಗಿಲ್ಲ. ಆದರೆ ಅವರಿಗೆ ಅದು ಬೇಕೇ ಎಂದಾದರೆ ಅದವರಿಗೆ ದೊರೆಯುವದು. ನಮ್ಮ ಹೋರಾಟ ಸವಿನಯ ಶಾಸನ ಭಂಗವಾಗಬಹುದು. ಇಲ್ಲವೆ ಪ್ರತಿಸರಕಾರವನ್ನೇ ಸ್ಥಾಪಿಸುವ ರೂಪ ತಾಳಬಹುದು." ಎಂದು ಎಚ್ಚರಿಕೆಯಿತ್ತರು. ಇತರ ಪಕ್ಷಗಳೂ ಸರಕಾರದ ದಬ್ಬಾಳಿಕೆಗೆ ರೋಸಿಹೋಗಿವೆ. ಮಾ-ಯೋಚಿತ ಪಕ್ಷದ ಮೂವರು ಗವ್ಹರ್ನರರ ಕಾರ್ಯಕಾರಿ ಮಂಡಲದಿಂದ ತಮ್ಮ ಪಕ್ಷದ ಆಜ್ಞೆ ಮೇರೆಗೆ ಹೊರಬಿದ್ದು ಬಂದರು. ಬರಲೊಲ್ಲದ ಯು-ಲಾನರನ್ನು ಪಕ್ಷದಿಂದ ತಳ್ಳಲಾಗಿದೆ. ಬ್ರಿ. ಪಾರ್ಲಮೆಂಟಿನಲ್ಲಿ ಈ ವಿಷಯ ಚರ್ಚೆ ನಡೆದು ಅನೇಕ ಸದಸ್ಯರು ಜನನಾಯಕರೊಡನೆ ಪುನಃ ಮಾತುಕತೆ ಆರಂಭಿಸಬೇಕೆಂದು ಸೂಚಿಸಿದರು.

ಕೊಡಗಿನ ಶ್ರೀ ಅನಂತ ಪದ್ಮನಾಭರಾಯರು ತಾ. ೧೦ ನೇ ದಿನ ಸಾಹಿತ್ಯ ಪರಿಷತ್ತಿನ ಪರವಾಗಿ ಗಮಕ ಕಲಾ ಪ್ರಚಾರಕ್ಕೆ ಹರಪನಹಳ್ಳಿಗೆ ಬಂದು ದೊಡ್ಡ ಶಾಲೆಯಲ್ಲಿ ಕುಮಾರ ವ್ಯಾಸ ಭಾರತದಲ್ಲಿ ಕೃಷ್ಣಾರ್ಜುನ ಸಂವಾದ ಭಾಗವನ್ನು ಸುಶ್ರಾವ್ಯವಾಗಿ ಓದಿದರು. ಬಳ್ಳಾರಿ, ಹೊಸಪೇಟಗಳಲ್ಲಿಯೂ ಅವರ ಕಾರ್ಯಕ್ರಮಗಳಾದವು.

ಕರ್ನಾಟಕ ಏಕೀಕರಣ ಸಂಘದ ಕಾರ್ಯಕಾರಿ ಮಂಡಳದ ಸಭೆಯು ತಾ. ೮ ನೇ ದಿನ ಆದವಾನಿಯಲ್ಲಿ ಸಾಂಗವಾಯಿತು. ಕಂದಾಯ ಮಂತ್ರಿಗಳಾದ ಮಾನ್ಯ ಕಾರಂತರೂ ಸಭೆಗೆ ಬಂದಿದ್ದರು. ಕರ್ನಾಟಕ ವಾಚನಾಲಯದ ಉದ್ಘಾಟನವು ಅವರ ಹಸ್ತದಿಂದ ನೆರವೇರಿತು.

ತಿಕೋಟೆಯಲ್ಲಿ ದಿವಂಗತ ಕೌಜಲಗಿ ಹಣಮಂತರಾಯರ ಪುಣ್ಯತಿಥಿ ನಿಮಿತ್ತ ತಾ. ೧೦ ನೇ ದಿನ ಪ್ರಭಾತಫೇರಿ, ಸಭೆ ಮೊದಲಾದವುಗಳು ನಡೆದು ಅವರ ಪುಣ್ಯಸ್ಮರಣ ಮಾಡಲಾಯಿತು.

ವನಶಿಗ್ಗಲಿ ತರುಣ ಸಂಘಕ್ಕೆ ಶ್ರೀ ಹಿರೇಮಠ ಅಯ್ಯನವರು ಅಧ್ಯಕ್ಷರು, ವೀರಭದ್ರಪ್ಪ ಬಿದರಳ್ಳಿ ಅವರು ಕಾರ್ಯದರ್ಶಿಗಳು ಆಗಿ ಆರಿಸಲ್ಪಟ್ಟಿದ್ದಾರೆ.

AC 62.

# "ಸಂಪೂರ್ಣವಾಗಿ ಸಹಕರಿಸಿರಿ"

—ಪಂಡಿತ ನೆಹರು

"ಆಹಾರದ ಪರಿಸ್ಥಿತಿಯಿಂದ ಉಂಟಾಗಿರುವ ಸಂಕಟವನ್ನು ತಪ್ಪಿಸಲು ಮತ್ತು ಅದರ ಭಾರವನ್ನು ಎಲ್ಲರೂ ಸಮನಾಗಿ ವಹಿಸಲು ನಮ್ಮೆಲ್ಲರ ಸಂಪೂರ್ಣ ಸಹಕಾರವು ಬೇಕಾಗುತ್ತದೆ. ವಿಶೇಷವಾಗಿ, ಸಾರ್ವಜನಿಕ ಸಹಕಾರವು ಅವಶ್ಯವಾಗಿದೆ."

—ಫೆಬ್ರುವರಿ ೧೭ಕ್ಕೆ ಕೊಟ್ಟ ಹೇಳಿಕೆ

## ನಮ್ಮ ಪ್ರತಿಜ್ಞೆ ಮತ್ತು ಬಿನ್ನಹ

ಕೊರತೆಯ ಭಾಗಗಳಲ್ಲಿರುವವರಿಗೆ ನಾವು ಸಂಪೂರ್ಣ ಬೆಂಬಲ ವೀಯುವ ಬಗ್ಗೆ ಪ್ರತಿಜ್ಞೆ ಮಾಡುತ್ತೇವೆ. ದೇಶದ ಯಾವತ್ತೂ ಸಾಧನ ಸಾಮಗ್ರಿಯನ್ನು ಒಂದುಗೂಡಿಸಿ ಅವರಿಗೆ ತ್ವರಿತವಾಗಿ ನೆರವನ್ನು ನೀಡಲಾಗುತ್ತಿದೆ. ಅವರಿಗಿರುವ ಆಹಾರದ ಕೊರತೆಯಲ್ಲಿ ದೇಶದ ಉಳಿದ ಭಾಗವು ಪಾಲು ವಹಿಸುವದಲ್ಲದೆ ಸಮಪಾಲು ವಹಿಸುವದು. ಪ್ರತಿಯೊಬ್ಬನಿಗೆ ಯೋಗ್ಯ ಪ್ರಮಾಣದಲ್ಲಿ ಆಹಾರವು ದೊರೆಯುವಂತೆ ಮಾಡುವದಕ್ಕಾಗಿ ಶಿದಾ ಪದ್ಧತಿಯನ್ನು ವಿಸ್ತರಿಸಲಾಗುತ್ತಿದೆ. ಬೆಲೆ ನಿಯಂತ್ರಣವನ್ನು ತಪ್ಪದೆ ಸಾಗಿಸಲಾಗುವುದು. ಶಾಂತತೆ ಮತ್ತು ಆತ್ಮ ವಿಶ್ವಾಸದಿಂದ ನಡೆದುಕೊಳ್ಳಿರಿ. ನಿಮಗೆ ಅವಶ್ಯವಿರುವದಕ್ಕಿಂತ ಹೆಚ್ಚಿಗೆ ಕೊಂಡುಕೊಳ್ಳಬೇಡಿರಿ. ಲಾಭಬಡಕರೊಡನೆ ಯಾವದೇ ತರದ ಸಂಬಂಧವನ್ನಿಟ್ಟುಕೊಳ್ಳಬೇಡಿರಿ.

ಹೆಚ್ಚುಳಿದ ಭಾಗಗಳಲ್ಲಿರುವವರಿಗೆ ಸಂಪೂರ್ಣ ಸಹಾಯವನ್ನು ಒದಗಿಸಬೇಕೆಂದು ನಾವು ಅವರಿಗೆ ಬಿನ್ನವಿಸಿಕೊಳ್ಳುತ್ತೇವೆ. ನಿಮ್ಮಲ್ಲಿ ಹೆಚ್ಚಾಗಿ ಇರುವ ಕಾಳನ್ನು ನೀವು ಕೊಟ್ಟುಬಿಡಬೇಕಾಗಿದ್ದರೂ ನಿಮಗೆ ಸಾಕಷ್ಟು ಕಾಳು ಉಳಿಯುವುದು. ನಿಮ್ಮ ಪಟ್ಟಣದಲ್ಲಿ ಶಿದಾ ಕ್ರಮವನ್ನು ಬಳಕೆಯಲ್ಲಿ ತಂದರೆ ನಿಮ್ಮ ದೇಶಬಾಂಧವರಿಗೆ ನೆರವಾಗುವುದಕ್ಕಾಗಿ ಹೀಗೆ ಮಾಡಲಾಗಿದೆಯೆಂದು ನೆನಪಿನಲ್ಲಿಡಿರಿ. ಇಷ್ಟೆಲ್ಲ ಆಗಿಯೂ ನಿಮ್ಮ ಹತ್ತರ ಸಾಕಷ್ಟು ಉಳಿಯುವುದು. ಸ್ವಲ್ಪಾದರೂ ಕೂಡಿಹಾಕಿ ಇಡಬೇಡಿರಿ. ಅಧಿಕಾರಿಗಳೊಡನೆ ಸಹಕರಿಸಿರಿ.

**ಆಹಾರದ**
**ಕೊರತೆಯನ್ನು**
**ಹೋಗಲಾಡಿಸಿರಿ**

ಒಮ್ಮನಸ್ಸಿನಿಂದ ದುಡಿಯಿರಿ ಎಲ್ಲರೂ ಪಾಲುಗಾರರಾಗಿರಿ.

## ವ್ಯಾಪಾರಿಗಳಿಗೆ ಮತ್ತು ಬೆಳೆಯುವವರಿಗೆ ಸಂದೇಶ

ನಿಮಗೆ ಶಕ್ಯವಿದ್ದಷ್ಟು ಕಾಳನ್ನೆಲ್ಲ ಹೊರಗೆಡವಿರಿ; ನೀವು ಕೂಡಿಡುವ ಪ್ರತಿಯೊಂದು ಮಣ ಕಾಳು ಒಬ್ಬ ದೇಶ ಬಾಂಧವನ ಮರಣಕ್ಕೆ ಕಾರಣವಾಗುವುದು. ನಿಯಂತ್ರಿತ ಬೆಲೆಗಳಿಗಷ್ಟೇ ಮಾರಿರಿ–ಅವು ನಿಮಗೆ ಹಾಗೂ ಗ್ರಾಹಕರಿಗೆ ಇಬ್ಬರಿಗೂ ಯೋಗ್ಯವಾಗಿವೆ. ಎರಡನೇಯವರಿಗೆ ದುಃಖ ಕೊಟ್ಟು ಹಣ ಗಳಿಸುವುದು ಪಾಪವೆಂದು ತಿಳಿಯತಕ್ಕದ್ದು.

ಲಾಭಬಡಕರನ್ನು ಮತ್ತು ಕಳ್ಳಪೇಟಿಗಾರರನ್ನು ತಮ್ಮ ಯಾವತ್ತೂ ಶಕ್ತಿಯನ್ನು ಉಪಯೋಗಿಸಿ ಹತ್ತಿಕ್ಕಬೇಕೆಂದು ಸರಕಾರ ಹಾಗೂ ಜನತೆಯು ನಿಶ್ಚಯಿಸಿರುತ್ತದೆ. ಕಳ್ಳಪೇಟಿಯನ್ನು ತಪ್ಪಿಸಿರಿ; ಅದು ಅಪರಾಧವಾಗಿದೆ.

ಹಿಂದುಸ್ಥಾನ ಸರಕಾರದ ಆಹಾರ ಖಾತೆ, ಹೊಸದಿಲ್ಲಿ, ಇವರ ಪ್ರಕಟನೆ

ಕರ್ಮವೀರ

# ಹರಿಜನ ಪುರವಣಿ



## ಅಜ್ಞಾತ

ಅವನು (ಪರಮಾತ್ಮ) ಅಜ್ಞೇಯನೆಂದು ಕೆಲವು ಪಂಡಿತರು ವರ್ಣಿಸುತ್ತಾರೆ, ಬೇರೆ ಹಲವರು ಅಜ್ಞಾತನೆಂದು ಕರೆಯುತ್ತಾರೆ, ಇನ್ನು ಕೆಲವರು 'ನೇತಿ' ಎಂದು ವರ್ಣಿಸುತ್ತಾರೆ. ಸದ್ಯದ ನನ್ನ ಉದ್ದೇಶಕ್ಕೆ ಅಜ್ಞಾತವೆಂಬುದು ಸರಿಹೋಗುವುದು.

ನಿನ್ನೆ (ಜೂನ ೯) ದಿನ ನಾನು ಪ್ರಾರ್ಥನಾ ಸಭೆಯಲ್ಲಿ ಸಭಿಕರನ್ನುದ್ದೇಶಿಸಿ ಕೆಲ ಮಾತುಗಳನ್ನು ಹೇಳಿದೆನು. ನೀವು ಅವನನ್ನು ಕುರಿತು ಪ್ರಾರ್ಥಿಸಬೇಕು. ಅವನು ಕೊಡಬಹುದಾದ ಶಕ್ತಿ ಮತ್ತು ರಕ್ಷಣೆಯನ್ನೆ ಅವಲಂಬಿಸಬೇಕು; ಇದಕ್ಕಿಂತ ಹೆಚ್ಚು ನಾನೇನೂ ಹೇಳಲಾರೆನು ಎಂದು ಆಗ ನಾನು ನುಡಿದೆನು. ಎಲ್ಲರ ಸಮಕ್ಷದಲ್ಲಿ ನಡೆದು ಈ ಪ್ರಚಂಡ ಹಿಂದೀ ನಾಟಕದಲ್ಲಿ ಎಲ್ಲ ಪಕ್ಷದವರೂ ನಿವಾರಿಸಬೇಕಾದ ಅನೇಕ ಅಡಚಣಿಗಳಿವೆ. ಮನುಷ್ಯನ ಬುದ್ಧಿಯನ್ನೆ ಆಗಾಗ ಗೊಂದಲದಲ್ಲಿ ಕೆಡುಹಿ, ಅವನು ಕಟ್ಟಿದ ಗಾಳಿಗೋಪುರಗಳನ್ನೆಲ್ಲ ಕ್ಷಣಾರ್ಧದಲ್ಲಿ ನೆಲಕ್ಕೆ ಉರುಳಿಸುತಿರುವ ಆ ಅಜ್ಞಾತನನ್ನೆ ಎಲ್ಲರೂ ಅವಲಂಬಿಸತಕ್ಕದ್ದು. ಅಜ್ಞಾತ ಪರಮಾತ್ಮನಲ್ಲಿ ತನಗೆ ವಿಶ್ವಾಸವಿದೆಂದು ಬ್ರಿಟಿಶ್ ಪಕ್ಷವು ಹೇಳಿಕೊಳ್ಳುತ್ತಿದೆ. ಮುಸ್ಲಿಂ ಲೀಗವೂ ಹಾಗೆಯೆ ಹೇಳಿಕೊಳ್ಳುತಿದೆ. "ಅಲ್ಲಾ ಹೋ ಅಕಬರ್" ಎಂದು ಘೋಷಿಸುವಲ್ಲಿ ಅದಕ್ಕೆ ಸಂತೋಷ. ಕಾಂಗ್ರೆಸ್ಸಿಗೆ ಇಂಥದೊಂದೇ ಘೋಷಣೆ ಇಲ್ಲದಿರುವುದು ಸ್ವಾಭಾವಿಕ. ಆದರೂ ಅದು ಸಮಸ್ತ ದೇಶದ ಪ್ರಾತಿನಿಧಿಕ ಸಂಸ್ಥೆಯಾಗಿದ್ದರೆ ಪರಮಾತ್ಮನಲ್ಲಿ ಶ್ರದ್ಧೆಯಿದ್ದ ಕೋಟಿಗಟ್ಲೆ ಜನರನ್ನು ಅದು ಪ್ರತಿನಿಧಿಸಬೇಕಾಗುವುದು; ಅವರು ಪರಮಾತ್ಮನ ಗೃಹದ ಯಾವ ಭಾಗದಲ್ಲಿದ್ದರೂ ಚಿಂತೆಯಿಲ್ಲ.

ಇದನ್ನು ಬರೆಯುವಾಗ, ನನ್ನಲ್ಲಿ ಅದಮ್ಯ ಆಶಾವಾದಿತ್ವವಿದ್ದರೂ ರಾಜಕೀಯದಲ್ಲಾದರೂ ಎಲ್ಲ ಸುರಕ್ಷಿತವಿದೆಂದು ನಿರ್ಣಾಯಕವಾಗಿ ಹೇಳಲು ನಾನು ಸಮರ್ಥನಿರುವುದಿಲ್ಲ. ಆದುದರಿಂದ ಆಯಾ ಪಕ್ಷಗಳವರು ಬಹಳ ಪ್ರಯತ್ನ ಮಾಡಿದರೂ ಅಸುರಕ್ಷಿತತೆ ಸಂಭವಿಸಿದ್ದಾದರೆ ಅದೂ ಒಳಿತು ಅದರಲ್ಲಿಯೇ ಸುರಕ್ಷಿತತೆ ಇದೆಂದು ನನ್ನಂತೆ ಅವರೂ ಭಾವಿಸಬೇಕೆಂದು ಮಾತ್ರ ನಾನು ಹೇಳಬಲ್ಲೆ. ನಾವೆಲ್ಲ ಪರಮಾತ್ಮನ ಮಕ್ಕಳಿದ್ದರೆ-ಇರುವೆವು-ನಾವು ತಿಳಿಯಲಿ ತಿಳಿಯದಿರಲಿ, ಏನೇ ಸಂಭವಿಸಿದರೂ ಅದನ್ನು ಸಂತೋಷದಿಂದ ಸ್ವೀಕರಿಸಿ ಉತ್ಸಾಹದಿಂದ ಮುಂದಿನ ಮಾರ್ಗದಲ್ಲಿ ವಿಶ್ವಾಸವಿಟ್ಟು ಅದನ್ನು ಕಾರ್ಯಕಾರಿ ಮಾಡತಕ್ಕದ್ದು. ಇಡೀ ಹಿಂದುಸ್ತಾನದ ಹಿತದ ದೃಷ್ಟಿಯಿಂದ ಪ್ರತಿಯೊಂದು ಪಕ್ಷವು ತನ್ನ ಪರಮಾವಧಿ ಪ್ರಾಮಾಣಿಕತೆಯಿಂದ ಕಾರ್ಯ ಮಾಡಬೇಕಾದುದೊಂದೇ ವಿಧಿ. ಏಕೆಂದರೆ ಪಣಕ್ಕೆ ಹಚ್ಚಿದುದು ಹಿಂದುಸ್ತಾನದ ಹಿತವೇ ಹೊರತು ಬೇರೆ ಯಾವುದೂ ಅಲ್ಲ.

ಹೊಸದಿಲ್ಲಿ ೧೦-೬-೪೬ — ಮೋ. ಕ. ಗಾಂಧಿ

## ಟೀಕೆ — ಟಿಪ್ಪಣೆಗಳು

### ಪ್ರಸಿದ್ಧಿಯ ಅವಶ್ಯಕತೆಯಿಲ್ಲ

ತಾನು ಹರಿಜನನಾಗಿದ್ದು ಜನಗಣತಿಯಲ್ಲಿ ಸವರ್ಣಗಳಲ್ಲಿದ್ದ ತನ್ನ ಹೆಸರನ್ನು ಕಿತ್ತಿಹಾಕಬಯಸುವೆನೆಂದು ಬ್ರಾಹ್ಮಣ ಸುದ್ದಿಗಾರನೊಬ್ಬನು ಬರೆದು ಇದನ್ನು ಪ್ರಸಿದ್ಧಿಸಬೇಕೆಂದು ತಿಳಿಸುತ್ತಾನೆ. ಪ್ರತಿಯೊಬ್ಬ ಸವರ್ಣ ಹಿಂದುವು ಅತಿ ನೀಚ ತರಗತಿಯವರೆಂದು ಹೇಳಲಾಗುತಿರುವ ಹರಿಜನ ತಾನೆಂದು ಭಾವಿಸಬೇಕೆಂದು ನಾನು ಹೇಳುತಿರುವುದಕ್ಕೆ ಮೇಲಿನದು ಸಂಬಂಧಿಸುತಿದೆ. ಅಂತರಾತ್ಮದಲ್ಲಿ ಆದ ಬದಲಾವಣೆಯನ್ನು ಪ್ರಸಿದ್ಧಿಸುವದರ ಅರ್ಥವೇನು ? ಮತಾಂತರ ಹೊಂದಿದವನು ತನ್ನ ದೈನಂದಿನ ಜೀವನದಲ್ಲಿ ಆ ಬದಲಾವಣೆಯನ್ನು ಆಚರಿಸುವದೆ ನಿಜವಾದ ಸಾಕ್ಷಿಯಾಗಿದೆ. ಆದುದರಿಂದ ಅವನು ಭಂಗಿಗಳೊಡನೆ ನಿಃಸಂಕೋಚವಾಗಿ ಕೂಡಿಕೊಂಡು ಅವರ ಜೀವನದಲ್ಲಿ ಪ್ರತ್ಯಕ್ಷ ಭಾಗವಹಿಸಬೇಕು. ಶಕ್ಯವಿದ್ದರೆ ಅವರಗೂಡ ತಾನು ವಾಸಿಸಬೇಕು ಅಥವಾ ಭಂಗಿಯೊಬ್ಬನಿಗೆ ತನ್ನಲ್ಲಿ ಬಂದು ಇರಲು ಕೇಳಿಕೊಳ್ಳಬೇಕು. ತನ್ನ ಮಕ್ಕಳನ್ನು ಹರಿಜನರಿಗೆ ಲಗ್ನ ಮಾಡಿ ಕೊಡಬೇಕು, ಇದಕ್ಕೆ ಯಾರಾದರೂ ಪ್ರಶ್ನೆ ಮಾಡಿದರೆ ತಾನು ತಾನಾಗಿಯೆ ಹರಿಜನನಾಗಿದ್ದು ಯಾವ ವರ್ಗದವನೆಂಬುದನ್ನು ಬರೆಸುವಾಗ ಜನಗಣತಿಯಲ್ಲಿ ಹರಿಜನ ಇಲ್ಲವೆ ಭಂಗಿಯೆಂದು ಬರೆಸಬೇಕು. ಹೀಗೆ ಮಾಡಿದ ಬಳಿಕ ಅವನು ಹರಿಜನರ ಹಕ್ಕುಬಾಧ್ಯತೆಗಳನ್ನು ಪಡೆಯಲು ಮಾತ್ರ ಹವಣಿಸಬಾರದು. ಉದಾಹರಣಾರ್ಥವಾಗಿ ಅವನು ಹರಿಜನ ಮತದಾರ ಯಾದಿಯಲ್ಲಿ ತನ್ನ ಹೆಸರನ್ನು ನೊಂದಾಯಿಸಬಾರದು. ಸ್ಪಷ್ಟೀಕರಿಸಿ ಹೇಳಬಹುದಾದರೆ ಅವನು ಹರಿಜನರಿಗಿದ್ದ ಹಕ್ಕುಬಾಧ್ಯತೆಗಳನ್ನು ಹೊಂದದೆ ಅವರ ಕೆಲಸಗಳನ್ನೆಲ್ಲ ಮಾಡತಕ್ಕದ್ದು. ಸ್ವತಂತ್ರ ಮತದಾರ ಸಂಘಗಳು ಅಸ್ತಿತ್ವದಲ್ಲಿರುವವರಿಗೆ ಅವನು ಮತದಾರನಾಗುವದನ್ನೆ ಬಿಟ್ಟುಗೊಡತಕ್ಕದ್ದು.

ಹೊಸದಿಲ್ಲಿ ೯—೬—೪೬ — ಮೋ. ಕ. ಗಾಂಧಿ (ಹರಿಜನ ಸೇವಕದಿಂದ)

* * *

### ಪೆಟ್ರೋಲ ಮತ್ತು ಕಳ್ಳಪೇಟೆ

ಸುದ್ದಿಗಾರನೊಬ್ಬನು ಹೀಗೆ ಬರೆಯುತ್ತಾನೆ—

"ಸಮಯ ಸಾಕಷ್ಟಿಲ್ಲದ್ದಕ್ಕಾಗಿ ಅವಶ್ಯಕ ಮಾಡಬೇಕಾದ ಪ್ರಯಾಣವನ್ನೆಲ್ಲ ರೇಲ್ವೆ ಮೂಲಕವೆ ಮಾಡುವದು ಶಕ್ಯವಿಲ್ಲ. ಆದುದರಿಂದ ಕಾರ್ಯಕರ್ತರು ಮೋಟರುಗಳಲ್ಲಿಯೆ ಬಹಳ ದೂರದ ಪ್ರವಾಸ ಮಾಡಬೇಕಾಗುತ್ತದೆ. ಪೆಟ್ರೋಲು ಸೀದಾ ಪದ್ಧತಿಯಿಂದ ಕೊಡಲಾಗುತಿದೆಯಾಯಾದ್ದರಿಂದ ಮತ್ತು ಬೇಕಾದಷ್ಟು ಪೆಟ್ರೋಲ ಸಿಕ್ಕದಿದ್ದುದರಿಂದ ಕಳ್ಳಪೇಟೆಯನ್ನಾಶ್ರಯಿಸಬೇಕಾಯಿತು. ಯಾರಾದರೊಬ್ಬರ ಸಹಾಯದಿಂದ ಅದನ್ನು ತರಲಾಗುವದು. ಇಲ್ಲವೆ ಮೋಟರ ಡ್ರಾಯವರನೊಬ್ಬನನ್ನು ಹಿಡಿದು ಕಳ್ಳಪೇಟೆಯಿಂದ ಅದನ್ನು ತರಲು ಕೇಳಿಕೊಳ್ಳಲಾಗುವದು. ಅವನು ಪೆಟ್ರೋಲಿಗಾಗಿ ಕೊಟ್ಟ ಹಣದ ಲೆಕ್ಕದವಾನದಿಂದ ಮೈಲಿಗೆ ಇಂತಿಷ್ಟೆಂದು ಅವನ ಬಾಡಿಗೆಯನ್ನು ಕೊಡಲಾಗುವದು

ಈ ಪರಿಸ್ಥಿತಿಯಲ್ಲಿ ಕಾರ್ಯಕರ್ತರು ಮೋಟರಿನಲ್ಲಿ ಪ್ರವಾಸ ಮಾಡುವದು ನ್ಯಾಯ್ಯವೇ ?

ಅವರು ಮೋಟರನ್ನುಪಯೋಗಿಸದಿದ್ದರೆ ಪ್ರವಾಸವನ್ನೆ ಬಿಟ್ಟುಬಿಡಬೇಕಾಗುವದು. ಅದರಿಂದ ಕಾರ್ಯಕ್ಕೆ ಹಾನಿಯುಂಟಾಗುವದು. ಬೇರೆ ಉಪಾಯವಿಲ್ಲೆಂದು ನಂಬುವದು ಸರಿಯಷ್ಟೆ.

ಸತ್ಯನಿಷ್ಠ ಕಾರ್ಯಕರ್ತರಾರೂ ಈ ಪರಿಸ್ಥಿತಿಯಲ್ಲಿ ಮೋಟರನ್ನುಪಯೋಗಿಸಬಾರದೆಂದು ನನ್ನ ಅಭಿಪ್ರಾಯ. ಸತ್ಯದಲ್ಲಿ ಅವನಿಗೆ ನಂಬಿಕೆಯಿಲ್ಲದಿದ್ದರೂ ವಿಚಾರಪೂರ್ವಕ ಸೇವೆಮಾಡಲು ಪ್ರಯತ್ನಿಸುವದಾದರೂ ಅವನು ಮೋಟರನ್ನು ಉಪಯೋಗಿಸಬಾರದು. ಅವನು ಹಾಗೆ ಮಾಡಿದ್ದಾದರೆ ತಿಳಿದೇ ಕಳ್ಳಪೇಟೆಗೆ ಪ್ರೋತ್ಸಾಹನೆಕೊಟ್ಟಂತಾಗುವದು. ಇಂಥ ಕೃತಿಯಿಂದ ಹಾನಿಯು ಹೊರತು ಬೇರೆ ಯಾವ ಲಾಭವೂ ಆಗದು. ನಾನು ಇದಕ್ಕೂ ಮುಂದೆ ಹೋಗಿ ಎಲ್ಲ ಸಂದರ್ಭಗಳಲ್ಲಿಯೂ ಮೋಟರನ್ನು ಉಪಯೋಗಿಸುವದು ಸರಿಯಲ್ಲೆಂದು ಹೇಳಬಯಸುತ್ತೇನೆ.

ಹೊಸದಿಲ್ಲಿ ೧೦....೬—೪೬ — ಮೋ. ಕ. ಗಾಂಧಿ (ಹರಿಜನ ಬಂಧುವಿನಿಂದ)

### ದಶಾಂಶ ನಾಣ್ಯಗಳು

ಬಡವರಿಗೆ ಹಾನಿಯಾಗದಂತೆ ದಶಾಂಶ ಪದ್ಧತಿಯನ್ನು ಹೇಗೆ ಜಾರಿಯಲ್ಲಿ ತರಬಹುದೆಂಬದನ್ನು ವಿವರಿಸುವ ಶ್ರೀ ಮಶ್ರೂವಾಲಾರ ಲೇಖನದ ಎರಡನೆ ಭಾಗವು ಪ್ರಸಿದ್ಧವಾಗಲಿದೆಂಬ ಕೊನೆಯ ಪ್ಯಾರಾ ಮುದ್ರಿತವಾಗುವದಕ್ಕೆ ನಾನು ತಪ್ಪಾಗಿ ಅಪ್ಪಣೆಯಿತ್ತೆನೆಂದು ನನಗೆನಿಸುತ್ತದೆ. ನಿಜವಾಗಿ ಹೇಳಬೇಕಾದರೆ ಈ ಬಗೆಯ ಸುಧಾರಣೆಯಬಗೆಗಂಭೀರ ರೀತಿಯಿಂದ ವಿಚಾರ ಮಾಡುವ ಸಮಯ ಬಂದಿದೆಂಬುದೇ ನನಗನಿಸುವದಿಲ್ಲ. ದಶಾಂಶ ನಾಣ್ಯಪದ್ಧತಿ ಎಷ್ಟೇ ಆಕರ್ಷಕವಾಗಿದ್ದರೂ ರಾಷ್ಟ್ರೀಯ ಸ್ವತಂತ್ರ ಸರಕಾರ ಸ್ಥಾಪಿತವಾಗುವವರೆಗೆ ಅದರ ವಿಚಾರವನ್ನೇ ಎತ್ತಕೂಡದೆಂಬ ಬಗ್ಗೆ ನಾನು ಸ್ಪಷ್ಟಾಭಿಪ್ರಾಯ ಪಡುತ್ತೇನೆ. ಆದುದರಿಂದ ಇಂಥ ಯೋಜನೆಯನ್ನು ಪ್ರಸಿದ್ಧಿಸುವದೇ ಸಂಪೂರ್ಣವಾಗಿ ಅಕಾಲಿಕವಾಗಿದೆ. ದೇಶದ ಅನೇಕ ವಿದ್ವಜ್ಜನರ ತಲೆಯಲ್ಲಿ ಸುಳಿದಾಡುತಿರುವ ಅನೇಕ ಆವಶ್ಯಕ ಮತ್ತು ಜರೂರಿಯ ಯೋಜನೆಗಳಿವೆ. ಯಾವದೋಂದು ಯೋಜನೆಯ ಬಗ್ಗೆ ಶಾಸನ ಮಾಡುವ ಮೊದಲು ಅದರ ಬಗ್ಗೆ ಯೋಗ್ಯ ತಿಳುವಳಿಕೆಯಾಗುವ ಹೆಚ್ಚು ಸುದಿನದ ವರೆಗೆ ದೇಶವು ದಾರಿ ನೋಡಬಹುದೆಂಬದು ನಿಶ್ಚಿತವಾಗಿದೆ. ಇಂಗ್ಲಂಡು ಹಲವಾರು ವರ್ಷಗಳವರೆಗೆ ದಾರಿ ಕಾಯ್ದಿದ್ದು ಇನ್ನೂ ಕಾಯುತಿರುವಾಗ ಬಡ ಉಪವಾಸ ಬಳಲುವ ಹಿಂದುಸ್ತಾನವು, ನಾಣ್ಯಪದ್ಧತಿಯಲ್ಲಿ ಇಷ್ಟೊಂದು ಉಗ್ರ ಸುಧಾರಣೆಯನ್ನು ಯಾಕೆ ಕೈಕೊಳ್ಳಬೇಕು? ಆ ವಿಷಯದ ಬಗ್ಗೆ ಜನಸಾಮಾನ್ಯರಿಗೆ ಏನೂ ಪರಿಚಯಮಾಡಿಕೊಡದೆ ಇಂಥ ಬದಲಾವಣೆ ಮಾಡುವದೇಕೆ ? ಯಾರದೂ ವಿರುದ್ಧ ಅಭಿಪ್ರಾಯವಿಲ್ಲದಂತಹ ವಿಷಯವೇನೂ ಇದಲ್ಲ. ಈಗಿದ್ದ ಸಂಗ್ರಹದಲ್ಲಿ ಆದು ಒಂದು ಕಾಳನ್ನುಕೂಡ ಹೆಚ್ಚಿಗೆ ಸೇರಿಸಲಾರದು. ರೂಪಾಯಿಯಲ್ಲಿ ೧೦೦ ಸೆಂಟುಗಳಿದ್ದರೇನು ೬೪ ದುಡ್ಡುಗಳಿದ್ದರೇನು? ಈ ಪ್ರಶ್ನೆ ಬಿಡಿಸುವದನ್ನು ಸದ್ಯಕ್ಕಿಂತ ಹೆಚ್ಚು ಸುಖದಾಯಕ ದಿನಗಳವರೆಗೆ ಮುಂದಕ್ಕೆ ಹಾಕಬಹುದು. ಶಾಸನ ಮಾಡುವ ಮೊದಲು ಚೆನ್ನಾಗಿ ತಿಳಿಸಿಕೊಡುವದು ಪ್ರಜಾಪ್ರಭುತ್ವದ ತತ್ವ. ಆದುದರಿಂದ ಎರಡನೇ ಲೇಖ ಬರುವದೆಂಬ ಕಲ್ಪನೆಯನ್ನು ಈಮೂಲಕ ತೆಗೆದು ಹಾಕುತ್ತೇನೆ.

ಹೊಸದಿಲ್ಲಿ ತಾ॥ ೯-೬-೪೬ — ಮೋ. ಕ. ಗಾಂಧಿ

### ಅದರ ಭಾಷೆ

ಒಬ್ಬನು ಬರೆಯುತ್ತಾನೆ—

"ಜಗತ್ತಿನ ಯಾವುದೇ ದೇಶಗಳಲ್ಲಿ ರಾಜ್ಯಘಟನೆಗಳನ್ನು ಸಿದ್ಧಗೊಳಿಸಿದಾಗ ಆ ಘಟನೆ ಯಾವಾಗಲೂ ಆಯಾ ದೇಶದ ಭಾಷೆಯಲ್ಲಿಯೇ ಬರೆಯಲ್ಪಟ್ಟಿವೆಯೆಂಬ ಅರಿವು ನಿಮಗಿರಬಹುದು. ಉದಾಹರಣೆಗಾಗಿ, ಫ್ರಾನ್ಸ, ಜರ್ಮನಿ, ಆಯರ್ಲಂಡ, ಇಜಿಪ್ತ, ಜಪಾನ ಇತ್ಯಾದಿ.

"ನಮ್ಮ ರಾಜ್ಯಘಟನೆಯೂ ನಮ್ಮ ರಾಷ್ಟ್ರಭಾಷೆಯಲ್ಲಿಯೇ ಬರೆಯಲ್ಪಟ್ಟರೆ ಉಚಿತವಾದೀತು. ಆದರೆ ಒಂದು ತೊಂದರೆ—ನಮ್ಮ ಹೈಕೋರ್ಟ ಅಥವಾ ಫೆಡರಲ್ ಕೋರ್ಟಿನ ನ್ಯಾಯಾಧೀಶರಲ್ಲಿ ಹಿಂದುಸ್ತಾನಿ ಬಲ್ಲವರು ಇದ್ದರೂ ಬಹಳ ವಿರಳ. ಆದುದರಿಂದ ಅವರು ತಮ್ಮ ಉಪಯೋಗಕ್ಕೆ ಇಂಗ್ಲೀಷ ಅನುವಾದವೊಂದನ್ನು ಮಾಡಿಸಿಕೊಳ್ಳಬೇಕಾಗುವದು.

"ಉದ್ಭವಿಸಬಹುದಾದ ಇನ್ನೊಂದು ಪ್ರಶ್ನೆಯೆಂದರೆ, ಘಟನಾ ಸಮಿತಿಯ ಸದಸ್ಯರಿಗೆ ಅದರ ಮೂಲತತ್ವಗಳನ್ನು ಅರಗಿಸಿಕೊಳ್ಳುವಷ್ಟು ಹಿಂದುಸ್ತಾನಿ ಬರುತ್ತದೆಯೆ ?"

ಈ ಪತ್ರ ನನ್ನ ಮನಸಿಗೆ ಬಂತು. ನಮ್ಮ ಘಟನೆ ಇಂಗ್ಲೀಷಿನಲ್ಲೇಕೆ ಇರಬೇಕು? ಅದು ನಿಶ್ಚಯವಾಗಿಯೂ ಭಾರತೀಯ ಭಾಷೆಗಳೊಂದರಲ್ಲಿ ಬರೆಯಲ್ಪಡಬೇಕು. ಆ ಭಾಷೆ ನನ್ನ ಅಭಿಪ್ರಾಯದಲ್ಲಿ, ಕೋಟ್ಯಂತರ ಜನರಿಗೆ ಸುಲಭವಾಗಿ ಅರ್ಥವಾಗುವ ಹಿಂದುಸ್ತಾನಿಯೆ ಇರಬಲ್ಲದು. ಸಾಲದ್ದಕ್ಕೆ ಹಾಗೆ ಮಾಡಿದರೆ ಜನತೆಯಲ್ಲಿ ವಿದ್ಯುತ್ಸಂಚಾರವಾಗುವದು. ಈಗಿರುವ ಸ್ಥಿತಿಯಲ್ಲಿ, ಘಟನಾ ಸಮಿತಿಯವರು ಘಟನೆಯ ಇಂಗ್ಲೀಷ ಅನುವಾದವೊಂದನ್ನು ಮಾಡಬೇಕು. ಅಷ್ಟೇ ಏಕೆ, ಪ್ರತಿಯೊಂದು ಪ್ರಾಂತಿಕ ಭಾಷೆಯಲ್ಲಿಯೂ ಅದರ ಅನುವಾದವಾಗಬೇಕು.

ಲೇಖಕನು ಎತ್ತಿರುವ ಎರಡನೆ ಮುದ್ದೆಯೂ ಉಚಿತವೇ ಆಗಿದೆ. ಆದರೆ ಘಟನಾ ಸಮಿತಿಯ ಸದಸ್ಯರನ್ನು ಸದ್ಯದ ಶಾಸನ ಸಭೆಗಳೇ ಆರಿಸುವದರಿಂದ ಈ ಲೇಖಕನ ಪತ್ರದಲ್ಲಿರುವ ಸಲಹೆಯನ್ನು ಸ್ವೀಕರಿಸಿ, ಶಾಸನ ಸಭೆಗಳು, ಸಾಧ್ಯವಾದ ಮಟ್ಟಿಗೆ, ಹಿಂದುಸ್ತಾನಿಯ ಪರಿಜ್ಞಾನವುಳ್ಳವರನ್ನೇ ಆರಿಸಲು ಎಡೆಯಿದೆ.

ಮಸೂರಿ ೩—೬—೪೬ — ಮೋ. ಕ. ಗಾಂಧಿ

( ಹರಿಜನ ಸೇವಕದಿಂದ )

### ಹಿಂದುಸ್ತಾನಿಯ ಮೇಲೆ ಟೀಕೆ

"ಹರಿಜನ ಸೇವಕ" ದ ಉರ್ದೂ ಲಿಪಿಯ ಆವೃತ್ತಿಯ ಮೇಲೆ ಹಿಂದೀ ಮತ್ತು ಉರ್ದೂ ಪತ್ರಿಗಗಳಲ್ಲಿ ಬಂದ ಟೀಕೆಗಳ ಮಾದರಿಗಳನ್ನು ಶ್ರೀ ಜೀವಣಜಿಯವರು ನನಗೆ ಕಳಿಸಿದ್ದಾರೆ. ಅವುಗಳು ಆದರ ಹಿಂದುಸ್ತಾನಿಯನ್ನು ಹಾಸ್ಯಮಾಡಿವೆ ಅದರ ಲೇಖಗಳಲ್ಲಿ ಬೇಕೆಂದೇ ಉರ್ದೂ ಶಬ್ದಗಳನ್ನು ಅನವಶ್ಯಕವಾಗಿ ತುರುಕಲಾಗಿದೆಯೆಂದು ಹಿಂದೀ ಟೀಕಾಕಾರರು ಅಭಿಪ್ರಾಯ ಪಡುತ್ತಿದ್ದರೆ ಉರ್ದೂ ಟೀಕಾಕಾರರು ತದ್ವಿರುದ್ಧವಾಗಿ ಮುಸ್ಲಿಮರಿಗೆ ಗೊತ್ತಿಲ್ಲದ ಸಂಸ್ಕೃತ ಶಬ್ದ ಪ್ರಯೋಗಗಳಿವೆಯೆಂದು ದೂರುತ್ತಾರೆ.

ಈ ಟೀಕೆಗಳಿಂದ ನನಗೆ ಸಂತೋಷವಾಗಿದೆ ಹೀಗೆ, "ಹರಿಜನ ಸೇವಕ" ಎಂದೇಕೆ ಈ ಪತ್ರಿಕೆಗೆ ಹೆಸರಿರಬೇಕು "ಹರಿಜನ ಖಿದಮತಗಾರ" ಎಂದು ಏಕಲ್ಲ? "ಸಂಪಾದಕ" ಎಂದೇಕೆ? "ಎಡಿಟರ" ಅಥವಾ "ಮುದಿರ" ಎಂದೇಕಿರಬಾರದು? ಉರ್ದೂ ಪ್ರೇಮಿಗಳು ಹಿಂದುಸ್ತಾನಿಯೂ ಉರ್ದುವೂ ಪರ್ಯಾಯವಾಚಿಗಳೆಂದು ನಂಬಿದ್ದಾರೆ. ಅತ್ತ ಹಿಂದೀ ಪ್ರೇಮಿಗಳಾದರೊ ಉರ್ದೂ ಲಿಪಿಯಲ್ಲಿ ಬರೆದಾಗ ಕೂಡ ಹಿಂದುಸ್ತಾನಿಯೆಂದರೆ ಹಿಂದೀ ಎಂದೇ ಬಗೆಯುತ್ತಾರೆ.

ಈ ಟೀಕೆಗಳು ನನ್ನ ಮನಸ್ಸನ್ನು ಹೊಕ್ಕು ಉರ್ದೂ ಲಿಪಿಯನ್ನು ನಾನು ಭಗ್ನಮನೋರಥನಾಗಿ ತ್ಯಜಿಸುವಂತೆ ಮಾಡುವವೆಂದು ಅವರು ಆಶಿಸಿರುವರೆಂದು ತೋರುತ್ತದೆ. ಆದರೆ ಆ ಆಶೆ ಪೂರ್ತಿಯಾಗುವ ಸಂಭಾವ್ಯತೆಯಿಲ್ಲ. ವಸ್ತುತಃ, ಉರ್ದುವನ್ನಾಗಲಿ ಹಿಂದಿಯನ್ನಾಗಲಿ ಹಿಂದುಸ್ತಾನಿಯೆಂದು ಹೆಸರಿಸತಕ್ಕದಲ್ಲ. ಇಂದು ಪ್ರಚಾರದಲ್ಲಿಲ್ಲದಿದ್ದರೇನು ಅದು ಎರಡೂ ಭಾಷೆಗಳ ವಿವೇಕಪೂರ್ಣ ಸಂಮಿಶ್ರಣ. ಪತ್ರಿಕಾ ವಿಮರ್ಶಕರೂ ಇತರ ಟೀಕಾಕಾರರೂ ತುಸು ತಾಳ್ಮೆಯನ್ನು ತೋರಿಸಿದರೆ, ಹಿಂದುಸ್ತಾನಿಯೆಂಬುದು ಹಿಂದೀ ಅಥವಾ ಉರ್ದುವಿನಿಂದ ಹೇಗೆ ಭಿನ್ನವಾಗಿದೆಯೆಂಬ ಮಾತು ಬಹು ಬೇಗನೆ ಗೋಚರವಾಗುವದು. "ಹರಿಜನ ಸೇವಕ"ಕ್ಕೆ ಲೇಖ ಬರೆಯುವವರು ಇನ್ನೂ ಹೆಣಗುತ್ತಲೇ ಇರುವರೆಂದು ನಾನು ಒಪ್ಪಿಕೊಳ್ಳುವೆ. ಆದರೆ ಇಟ್ಟುಕೊಂಡ ಗುರಿಯನ್ನು ಮುಟ್ಟುವ

—೮ನೇ ಪುಟ ನೋಡಿರಿ

# ಸಂಬುದ್ಧಿಯೆ ಉಪಾಯ

“ಸತ್ಯ ಅಹಿಂಸೆಗಳ ವಿಷಯದಲ್ಲಿ ನೀವು ತೊಟ್ಟ ಹಟವೇ ನಿಮ್ಮ ಕಡೆಗೆ ನನ್ನನ್ನು ಇಷ್ಟು ಬಲವಾಗಿ ಸೆಳೆದಿದೆ. ಸತ್ಯ ಅಹಿಂಸೆಗಳ ಬಯಕೆಯೊಂದೇ ಜನರನ್ನು ಅಹಿಂಸಕರಾಗಿ ಮಾಡಲು ಸಾಲದೆಂದು ನನಗೆ ಮನವರಿಕೆಯಾಗಿದೆ. ಆದುದರಿಂದ ಅಹಿಂಸೆಯನ್ನು ಬೋಧಿಸುವದೊಂದೇ ಸಾಲದೆಂದೂ ತಮ್ಮ ಅಂತರಂಗವನ್ನೆ ಬುಡಮುಟ್ಟ ಪುನರ್ವ್ಯವಸ್ಥೆಗೊಳಿಸುವ ಒಂದು ಹಾದಿಯನ್ನು ಜನರಿಗೆ ಕಲಿಸಬೇಕೆಂದೂ ನನಗೆ ತೋರುತ್ತದೆ.

“ಅಹಿಂಸೆಯಿಂದ ಮೋಹಿತನಾದ ಮಾತ್ರಕ್ಕೆ ಅಥವಾ ಅಹಿಂಸಕನಾಗಬೇಕೆಂದು ಬಯಸಿದ ಮಾತ್ರಕ್ಕೆ ಮನುಷ್ಯನು ನಿಜವಾದ ಅಹಿಂಸಕನಾಗಲಾರನು. ಜಾಗ್ರತ ಚಿತ್ತದ ಚಲನವಲನಗಳಿಗೆ ಮೇಳವಾಗಿ ಚಲಿಸುವದು ಸುಷುಪ್ತ ಚಿತ್ತಕ್ಕೆ ಸುಲಭವಾಗಿ ಸಾಧ್ಯವಾಗುವದಿಲ್ಲ. ಜಾಗ್ರತ ಚಿತ್ತ ಯಾವುದಾದರೊಂದು ವಿಷಯದಲ್ಲಿ ಲಗ್ನ-ಮಗ್ನವಾಗಿದೆಯೆಂದು ತೋರಿದಾಗ ಕೂಡ ಸುಷುಪ್ತ ಚೇತನದ ಮೇಲೆ ಯಾವ ಪರಿಣಾಮವೂ ಆಗದಿರುವದುಂಟು. ಸುಷುಪ್ತ ಚೇತನದ ಈ ಜಡತೆಗೆ ನಮ್ಮಲ್ಲಿ ಹುದುಗಿರುವ ಗುಪ್ತ ಆಶೆ-ಭೀತಿಗಳೇ ಕಾರಣ. ಅವುಗಳು ವಿರುದ್ಧ ವಿಚಾರಗಳಿಗೆ ತಂತಾವೆ ಸಕ್ರಿಯವಾಗಲು ಅವಕಾಶವೀಯುವದಿಲ್ಲ. ಈ ಸುಷುಪ್ತ ಚೇತನವನ್ನು ಸ್ವಚ್ಛಗೊಳಿಸಿ ಅಡಗಿರುವ ಅಡ್ಡಿಗಳನ್ನು ನಿವಾರಿಸಿದ ಹೊರತು ಮನುಷ್ಯನ ನಿಜವಾದ ಸ್ವಭಾವ—ಆ ಸ್ವಭಾವ ವಿವೇಕಯುಕ್ತವೂ ಕರುಣಾಪೂರ್ಣವೂ ಇರುವದು—ಪ್ರಕಾಶಕ್ಕೆ ಬರಲಾರದು.

“ಅದ್ದರಿಂದ ನಿಜವಾದ ಕಳಕಳಿಯುಳ್ಳವರಿಗೆ ಅವರಲ್ಲಿ ಅವಿತಿರುವ, ಸತ್ಯ ಅಹಿಂಸೆಗಳಿಗೆ ತಡೆಯಾದ ಅರಿಯದ ಅಡ್ಡಿಗಳನ್ನು ತೊಡೆದು ಹಾಕುವ ಸರಿಯಾದ ಉಪಾಯಗಳನ್ನು ಉಪದೇಶಿಸಿ ಸತ್ಯ ಅಹಿಂಸೆಗಳನ್ನು; ವಿಶ್ವಾಸಾರ್ಹವೂ ಸ್ವಯಂಪ್ರೇರಿತವೂ ಪರಿಣಾಮಕಾರಿಯೂ ಆಗುವಂತೆ ಮಾಡುವದು ಅವಶ್ಯ.

“ಪ್ರಾರ್ಥನೆ, ಕೈಗಾರಿಕೆ ಮೊದಲಾದ ಬಾಹ್ಯ ಆಚಾರಗಳು ಸತ್ಯ, ಕಾರುಣ್ಯಗಳನ್ನು ಸಾಧಿಸುವ ಕುಶಲ ಉಪಾಯಗಳಲ್ಲ. ಇದಕ್ಕೆ ಮಾನವ ಜಾತಿಯ ಇಡೀ ಇತಿಹಾಸವೇ ಪ್ರಮಾಣ. ಯೋಗ್ಯ ಧ್ಯೇಯಬದ್ಧವಾದ ಅಂತರಿಕ ಪ್ರಯತ್ನದಿಂದ ಮಾತ್ರವೇ ಮನುಷ್ಯನು ತನ್ನನ್ನು ಮಾರ್ಪಡಿಸಿಕೊಳ್ಳಬಲ್ಲನು. ಸದುದ್ದೇಶಗಳಷ್ಟೇ ಸಾಲವು—ಸರಿಯಾದ ಸಾಧನವನ್ನು ಉಪಯೋಗಿಸಬೇಕಾಗುವದು. ಸುದೈವದಿಂದ, ಶುದ್ಧವೂ ಸಮರ್ಥವೂ ಮಾನವಪ್ರವೃತ್ತಿಗೆ ಹೊಂದಿಕೆಯಾಗುವಂಥವೂ ಎಂದು ಪ್ರಯೋಗದಿಂದ ಸಿದ್ಧವಾದ ಉಪಾಯಗಳು—ಅವುಗಳನ್ನು ಆಚಾರಕ್ಕೆ ಇಳಿಸಿದವರು ವಿರಳವಾದರೆಂಬ ಮಾತು ಒತ್ತಟ್ಟಿಗಿರಲಿ—ಇವೆ. ನನ್ನ ಮನಸಿಗೆ, ಬುದ್ಧನು ಉಜ್ವಲ ಶಬ್ದಗಳಲ್ಲಿ ಪ್ರತಿಬೋಧಿಸಿದ ಸಂಬುದ್ಧಿಯ ಉಪಾಯ ಪರಮ ಸಮರ್ಥವಾದುದೆಂದು ತೋರುತ್ತದೆ. ಎಚ್ಚರವುಳ್ಳವನೂ ಮಿತಭಾಷಿಯೂ ಆಗಿದ್ದ ಆ ಭಗವಂತನು ಈ ಮಾರ್ಗದಿಂದ ಏಳೇ ದಿನಗಳಲ್ಲಿ ಸಿದ್ಧಿಯನ್ನು ಸಂಪಾದಿಸಬಹುದೆಂಬಷ್ಟು ದೂರ ಅದರ ಮಹಿಮೆಯನ್ನು ಕೊಂಡಾಡಿದ್ದಾನೆ.

“ಸಂಬುದ್ಧಿಯ ಮಾರ್ಗವನ್ನು ಕುರಿತು ನೀವಿನ್ನೂ ಓದಿರದಿದ್ದರೆ ಅದರ ಸಂಕ್ಷಿಪ್ತ ವಿವರಣೆಯನ್ನು ಕೊಡುವೆ.

“ಸಂಬುದ್ಧಿ ಮಾರ್ಗವೆಂದರೆ, ನಮ್ಮ ಚಿತ್ತದ ಮತ್ತು ಅದು ನಮ್ಮ ದೇಹದ ಮೂಲಕ ತೋರುವ ವ್ಯಾಪಾರಗಳ ಮಾನಸಿಕ ಮತ್ತು ಭಾವನಾತ್ಮಕ ಮೂಲದ ಮೇಲೆ ನಿರಂತರವಾಗಿ ಕಣ್ಣಿಡುವದು, ಅವಿರತವಾಗಿ ಅವುಗಳ ಧ್ಯಾಸದಲ್ಲಿರುವದು ಎಚ್ಚರವಾಗಿ, ಲಕ್ಷವಿಟ್ಟು ಅವುಗಳ ಪ್ರಜ್ಞೆಯಲ್ಲಿರುವದು ಮನುಷ್ಯನು ಪ್ರತಿಕ್ಷಣವೂ ನಿರೀಕ್ಷೆ, ಅರಿಮೆ, ಎಚ್ಚರಿಕೆಗಳ ಸ್ವಭಾವವನ್ನು ಅಭ್ಯಾಸ ಮಾಡಬೇಕು. ಈ ಪ್ರಜ್ಞೆಯಲ್ಲಿ ಅವನು ಪೂರ್ಣ ಅನಾಸಕ್ತನೂ ವಿರಾಗಿಯೂ ಆಗಿರುವದು ಅವಶ್ಯ. ಅವನು ವಿಮರ್ಶೆಮಾಡಬಾರದು, ಖಂಡಿಸಬಾರದು, ಪ್ರಶಂಸಿಸಬಾರದು. ಕೇವಲ ಪ್ರಜ್ಞೆ, ಬೋಧ ಇಷ್ಟೆ, ಇರಬೇಕು. ಬೇರೇನೂ ಅಲ್ಲ. ನಮ್ಮ ಶ್ವಾಸೋಚ್ಛ್ವಾಸವನ್ನು ಒಂದು ಕ್ಷಣ ನಿರೀಕ್ಷಿಸಿದರೆ ಇದರ ಅರ್ಥ ಸುಲಭವಾಗಿ ತಿಳಿಯುವದು ಏಕೆಂದರೆ ಬರಿ ಉಸಿರಾಡಿಸುವ ಕ್ರಿಯೆಯಲ್ಲಿ ನಮಗೆ ಯಾವದೇ ಬಯಕೆ ಭೀತಿಗಳು ಇಲ್ಲದಿರುವ ಕಾರಣ ಅದನ್ನು ನಾವು ಅನಾಸಕ್ತಿಯಿಂದ ನಿರೀಕ್ಷಿಸಬಲ್ಲೆವು.

“ಯಾವನೇ ಮನುಷ್ಯನು ತನ್ನ ಬುದ್ಧಿಯ, ಭಾವನೆಗಳ, ಮತ್ತು ತನ್ನ ದೇಹದಲ್ಲಿ ಆಗುವ ಅವುಗಳ ವ್ಯಾಪಾರಗಳ ಚಲನವಲನಗಳನ್ನು ತೀವ್ರವಾದ, ಸಂತತವಾದ, ಲಕ್ಷ್ಯದಲ್ಲಿಡುವ ಅವಸ್ಥೆಯಲ್ಲಿ ಉಳಿದನೆಂದರೆ, ಬೇಗನೆ ಅವನಲ್ಲಿ ಪರಿವರ್ತನೆಗಳಾಗತೊಡಗುವವು. ಅವನ ಮನಸ್ಸು ಪರಿಷ್ಕೃತವಾಗುವದು, ಮತ್ತು ಬಟ್ಟಬಯಲೋ ಎಂಬಂತಾಗುವದು. ಜಾಗ್ರತ ಚಿತ್ತದ ಪರಿಸ್ಫುಟ ಅವಸ್ಥೆಯಲ್ಲಿ ಸುಷುಪ್ತದ ಸಿಕ್ಕುಗಳು ಎದ್ದು ಹೊರಡತೊಡಗುವವು. ಪ್ರಜ್ಞೆಯ ಪ್ರಕಾಶದಲ್ಲಿ ಈ ಸಿಕ್ಕುಗಳು ಕರಗಿ ಹೋಗುವವು. ಆ ಮೇಲೆ ಪದರು ಪದರಾಗಿ, ಹೆಚ್ಚು ಹೆಚ್ಚು ದುರ್ಗಮವಾಗಿ ಇರುವ ಸುಷುಪ್ತ ಚೇತನದ ಹಾಳೆಗಳು ಒಂದೊಂದಾಗಿ ಎದ್ದು ಪ್ರಜ್ಞಾ ಪ್ರಕಾಶದಲ್ಲಿ ಲೀನವಾಗಿ ಹೋಗುವವು.

“ಈ ಇಡಿ ಕ್ರಮವನ್ನು ಶುದ್ಧವಾಗಿ ಪಾಲಿಸಿದರೆ ಅದು ಪ್ರಯತ್ನವಿಲ್ಲದೆಯೆ ಆಗುವದು. ಆದರಿಂದ ಏನೋ ಭಾರ ಇಳಿಸಿದಂತೆ ಅನಿಸಿ ತೀವ್ರವಾದ ಅನಂದಾನುಭೂತಿಯೊದಗುವದು. ಮನುಷ್ಯನು ದಿನೇ ದಿನೇ ವಿವೇಕಿಯೂ ಕರುಣಿಯೂ ಆಗುತ್ತ ಹೋಗುವನು. ಅವನ ವಿವೇಕ ಕಾರುಣ್ಯಗಳು ತನ್ನ ಮೇಲೆ ತಾನೇ ಹೊರಿಸಿಕೊಂಡವುಗಳಾಗಿರದೇ ತನಗೆ ತಾನಾಗಿ ವೇದ್ಯವಾದವುಗಳಾಗಿರುವವು. ಆದುದರಿಂದ ಅವು ವಿಶ್ವಾಸಾರ್ಹವಾಗುವವು. ಏಕೆಂದರೆ ಸುಷುಪ್ತ ಚಿತ್ತದಲ್ಲಿ ಅವುಗಳನ್ನು ವಿರೋಧಿಸುವ ಯಾವ ವಸ್ತುವೂ ಇರುವದಿಲ್ಲ.

“ಸಂಬುದ್ಧಿ ಮಾರ್ಗ ಪ್ರಾಚೀನರಿಗೆ ಚೆನ್ನಾಗಿ ತಿಳಿದಿತ್ತೆಂಬುದನ್ನು ಸಿದ್ಧಗೊಳಿಸಲು ಪಾಶ್ಚಿಮಾತ್ಯ ಅಥವಾ ಭಾರತೀಯ ಪ್ರಮಾಣ ಗ್ರಂಥಗಳಿಂದ ಅವತರಣಿಕೆಗಳನ್ನೆತ್ತಿ ಕೊಡುವದನ್ನು ಬೇಕೆಂದೇ ನಾನು ಬಿಟ್ಟಿದ್ದೇನೆ. ಇದಕ್ಕೆ ಬೆಂಬಲವಾಗಿ ಯಾರ ಅಧಿಕಾರವಾಣಿಯೂ ಬೇಕಿಲ್ಲ. ಅದೆಷ್ಟು ಸರಳವೂ ಸುಲಭವೂ ಆಗಿದೆಯೆಂದರೆ ಯಾರು ಬೇಕಾದರೂ ಅದನ್ನು ತನ್ನ ಮೇಲೆ ಪ್ರಯೋಗಿಸಿ ಅದರ ಸಾಮರ್ಥ್ಯವನ್ನು ಪರೀಕ್ಷಿಸಿಕೊಳ್ಳಬಹುದು. ನೀವೂ ಅದನ್ನು ನಿಮ್ಮ ಮೇಲೆ ಪ್ರಯೋಗಿಸಿಕೊಂಡು ನೋಡಬಹುದು. ಪೂರ್ಣವಾದ, ಶಾಶ್ವತವಾದ, ನಿಜವಾದ ಆತ್ಮಪರಿವರ್ತನೆಯನ್ನು ಸಾಧಿಸಿಕೊಳ್ಳುವ ಅದ್ವಿತೀಯ ಸಾಧನವೊಂದನ್ನು ಬುದ್ಧದೇವನು ನಮಗೆ ದಯಪಾಲಿಸಿಹೋಗಿರುವನೆಂಬ ಮಾತು ನಿಮಗೆ ಒಂದೇ ವಾರದಲ್ಲಿ ಮನವರಿಕೆಯಾದೀತು.

“ನಾವು ವೈಯಕ್ತಿಕವಾಗಿ ಸತ್ಯಸಂಧರೂ ಅಹಿಂಸಕರೂ ಆದ ಹೊರತು ಜಗತ್ತಿನಲ್ಲಿ ಸತ್ಯ ಅಹಿಂಸೆಗಳನ್ನು ನೆಲೆಗೊಳಿಸುವದು ಸಾಧ್ಯವಿಲ್ಲ. ಆದುದರಿಂದ ಸತ್ಯಸಂಧರೂ ಅಹಿಂಸಕರೂ ಆಗುವ ಸಮಸ್ಯೆ ಅತ್ಯಂತ ಮಹತ್ವದ್ದಾಗಿದೆ. ಇಲ್ಲೊಂದು ಮಾರ್ಗವಿದೆ. ಅದನ್ನು ಮಹಾಮಹಿಮರು ಪ್ರಶಂಸಿಸಿದ್ದಾರೆ, ಅನೇಕರು ಪರೀಕ್ಷಿಸಿ ಶುದ್ಧ, ಪರಿಣಾಮಕರ, ಪ್ರತ್ಯಕ್ಷ ಉಪಾಯವೆಂದು ಮನಗಂಡಿದ್ದಾರೆ. ನಿಮ್ಮ ಗೆಳೆಯರ ಚಿಕ್ಕ ಚಿಕ್ಕ ಗುಂಪುಗಳು ಇದನ್ನು ಪ್ರಯೋಗಮಾಡಿ ಪರೀಕ್ಷಿಸುವಂತೆ ನೀವು ಮಾಡಬಹುದು. ಅವರು ಅದನ್ನು ತೀವ್ರ ಏಕಾಗ್ರತೆಯಿಂದ ಪ್ರಯೋಗ ಮಾಡಿ ಅನುಭವಗಳನ್ನು ಪರಸ್ಪರ ಹೋಲಿಸಿ ನೋಡಲಿ. ಅದರ ಪರಿಣಾಮವನ್ನು ನೀವೇ ನೋಡುವಿರಂತೆ. ಪ್ರಯೋಗವನ್ನು ನಿಮಗೆ ಬೇಕೆಂಬಷ್ಟು ಶಾಸ್ತ್ರೀಯವಾಗಿ ನಡೆಸಬಹುದು.

“ಇನ್ನೊಂದು ಅಂಶವೂ ವಿಚಾರಾರ್ಹವಾಗಿದೆ. ಅಧಿಕತರ ಪ್ರಯೋಜನ, ಶೀಘ್ರ ಪರಿಣಾಮಗಳು ದೊರೆಯುವವೆಂಬ ಆಧಾರದಿಂದ ಅಸತ್ಯ-ಹಿಂಸೆಗಳನ್ನು ಸಮರ್ಥಿಸುವ ಅನೇಕ ಪ್ರಾಮಾಣಿಕ ಜನರನ್ನು ನೀವು ಕಂಡಿದ್ದೀರಿ. ಅಂಥವರಿಗೆ ಸಂಬುದ್ಧಿಯನ್ನು ಬೋಧಿಸಿರಿ. ಎಂದರೆ ಅವರು ತಮ್ಮ ಮೌಢ್ಯ ದ್ವೇಷಗಳ ಬೇರುಗಳನ್ನು ತಾವೇ ಕಾಣುವರು. ತಮ್ಮ ಪದ್ಧತಿಗಳು ಕೇವಲ ಆ ಮೌಢ್ಯ ದ್ವೇಷಗಳ ತರ್ಕಸಿದ್ಧ ರೂಪಾಂತರಗಳೆಂದು ಅವರಿಗೆ ತಿಳಿಯುವದು. ಸ್ಥಿತಪ್ರಜ್ಞೆ ಮಂದರನ್ನು ಕ್ರೂರರನ್ನು ಕೂಡ ವಿವೇಕ ಕಾರುಣ್ಯಗಳ ಮಾರ್ಗಕ್ಕೆ ಒಯ್ಯಬಲ್ಲದು. ಏಕೆಂದರೆ ಅದು ಮಾಂದ್ಯ ಕ್ರೌರ್ಯಗಳ ಕಾರಣವಾದ ಲಾಲಸೆ ಮತ್ತು ಅದರಿಂದೊಗೆದ ಭಯಗಳನ್ನೇ ಇಲ್ಲದಂತೆ ಮಾಡಿಬಿಡುವದು

“ಈ ಸಂದೇಶದ ಗುಣವನ್ನು ಸಂದೇಶವಾಹಕನ ಯೋಗ್ಯತೆಯಿಂದ ಅಳೆಯಬೇಡಿರಿ. ದುರ್ಬಲ ಶಬ್ದಗಳಲ್ಲಿ ಹೇಳಲ್ಪಟ್ಟಿದ್ದರೂ ಈ ಸಂದೇಶ ನಿಮ್ಮ ಕಾರ್ಯದಲ್ಲಿ ಅತ್ಯಂತ ಮಹತ್ವದ್ದಾಗಿದೆ.”

ಹೀಗೆ ಬರೆಯುತ್ತಾರೆ ಶ್ರೀ ಫ್ರಿಡಮನ್ನರು—ಅಥವಾ ಜನತೆಗೆ ಭರತಾನಂದರೆಂಬ ಹೆಸರಿನಿಂದ ಹೆಚ್ಚು ಪರಿಚಿತರಾದ ಮಹನೀಯರು. ನಾನು ಅದನ್ನು ಪೂರ್ಣವಾಗಿ ಇಲ್ಲಿ ಕೊಟ್ಟಿದ್ದೇನೆ. ನಾನು ಇದರಿಂದ ಮೋಹಿತನಾಗಲಿಲ್ಲ. ಏಕೆಂದರೆ ಇತರ ಎಲ್ಲ ಉಪಾಯಗಳಂತೆ ಇದೂ ಪ್ರಚುರವಾಗಿಲ್ಲ. ಅದು ಏಳೇ ದಿನಗಳ ಕೆಲಸವಾಗಿದ್ದರೆ ಜಗತ್ತಿನಲ್ಲಿ ಅದಕ್ಕೆ ಸಾಕ್ಷ್ಯವಾಗಿರುವ ಜನ ಇಂದು ಇಷ್ಟು ವಿರಳವೇಕೆ? ಅದು ಸಹಾಯಕೋಪಾಯವಾಗಿರುವಷ್ಟುಮಟ್ಟಿಗೆ ಇತರ ಉಪಾಯಗಳ ಜತೆಗೆ ಅದೂ ಪ್ರಜ್ಞೆ, ಧ್ಯಾನ ಯೋಗ ಮೊದಲಾದ ಹೆಸರುಗಳಿಂದ ಪ್ರಚಾರದಲ್ಲಿದೆ. ಪ್ರಾರ್ಥನೆ, ಜಪಮಾಲೆ ಅಥವಾ ಬೇರಾವ ಬಾಹ್ಯ ಆಚಾರಗಳ ಸ್ಥಾನವನ್ನು ಅದು ಆಕ್ರಮಿಸಿಲ್ಲ. ಈ ಬಾಹ್ಯಾಚಾರಗಳು ಬಾಹ್ಯಾಡಂಬರಗಳಾಗಿರದಿದ್ದ ಪಕ್ಷದಲ್ಲಿ ಅವುಗಳಿಗೆ ಪೂರಕವಾಗಿ ಸಂಬುದ್ಧಿ ಉಪಾಯವಿದೆ. ನಿಜವಾಗಿ ನೋಡಿದರೆ ಪ್ರಾರ್ಥನೆಯೆಂಬುದು ಪೂರ್ಣವಾಗಿ ಅಂತರಿಕ ಕ್ರಿಯೆ. ರಾಮನಾಮದಲ್ಲಿಯೇ ತಾರಕ ಜಂತ್ರವನ್ನು ಕಂಡವರು ಸಂಬುದ್ಧಿಯನ್ನು ತಿಳಿದವರಾಗಿದ್ದು ಅವರು ಅನುಭವದಿಂದ ರಾಮನಾಮವು ಸತ್ಯ ಅಹಿಂಸೆಗಳ ಆಚರಣೆಗೆ ಪರಮ ಸಾಧನವೆಂದು ಕಂಡುಕೊಂಡಿದ್ದಾರೆ.

ಮಸೂರಿ — ಮೋ. ಕ. ಗಾಂಧಿ
೪—೬—೪೬

---

## ಟೀಕೆ ಟಿಪ್ಪಣಿಗಳು

(೭ನೇ ಪುಟದಿಂದ ಮುಂದರಿದುದು)

ದೃಢ ನಿರ್ಧಾರ ಅವರಲ್ಲಿದೆ. ಇಂದು ಎರಡೂ ಶೈಲಿಗಳ ಕಲಸು ಮೇಲೋಗರದಂತೆ ತೋರಬಹುದಾದ ಭಾಷೆಯನ್ನು ಓದುಗರು ಕೆಲ ದಿನ ತಾಳಿಕೊಳ್ಳಲಿ. ದೇವರು ನನಗೆ ಆಯುಷ್ಯಕೊಟ್ಟರೆ “ಹರಿಜನ ಸೇವಕ”ದ ಓದುಗರಿಗೆ ಹಿಂದೀ ಅಥವಾ ಉರ್ದುಗಳಷ್ಟೇ ಹಿಂದುಸ್ತಾನಿಯೂ ಮಧುರವಾಗಬಲ್ಲದೆಂಬುದನ್ನು ಸಿದ್ಧ ಮಾಡಿ ತೋರಿಸುವೆನೆಂದು ಆಶೆ ಹಿಡಿದಿದ್ದೇನೆ. ಈ ಎರಡು ರೂಪಗಳು ಅಥವಾ ಶೈಲಿಗಳು ಅಕ್ಕತಂಗಿಯರು, ಮತ್ತು ಅವೆರಡರ ಜತೆ-ಪ್ರಯತ್ನಗಳಿಂದ ಹಿಂದುಸ್ತಾನದ ಕೋಟ್ಯಂತರ ಜನರಿಗೆ ಉಪಯೋಗಕ್ಕೆ ಬೀಳುವ ಗಂಭೀರ ಭಾಷೆಯೊಂದು ಅಸ್ತಿತ್ವಕ್ಕೆ ಬರಬಲ್ಲದು ಎಂಬ ಮಾತು ಮನವರಿಕೆಯಾದೊಡನೆ ಇಂದಿನ ಈ ತೋರಿಕೆಯ ಜಗಳ ಬೇಗನೆ ಮಾಯವಾಗುವದು.

ಈ ಸಂಧಿಕಾಲದಲ್ಲಿ ಟೀಕಾಕಾರರು ತಮಗೆ ತಪ್ಪುಗಳೆಂದು ತೋರುವವುಗಳನ್ನು ನನಗೆ ತೋರಿಸಿಕೊಡಬೇಕು. ಅಂಥ ಟೀಕೆಗಳು ಸೌಹಾರ್ದದಿಂದ ಅಂಗೀಕರಿಸಲ್ಪಟ್ಟು “ಹರಿಜನಸೇವಕ”ದ ಶೈಲಿಯನ್ನು ಸುಧಾರಿಸಲು ಸಹಾಯವಾಗುವವು.

ಮುಸೂರಿ — ಮೋ. ಕ. ಗಾಂಧಿ
೫—೬—೪೬ — (ಹರಿಜನ ಸೇವಕದಿಂದ)

## ನಿಜ, ಆದರೆ ಹೊಸದಲ್ಲ

ಲಖನೋದ ಮೌಲವಿ ಹಮೀದುಲ್ಲಾ ಸಾಹೇಬರು ಮುಸೂರಿಯಲ್ಲಿ ನನ್ನನ್ನು ಕಾಣಬಂದವರು ನನಗೆ ತಮ್ಮ ಎರಡು ಪುಸ್ತಿಕೆಗಳನ್ನು ಕೊಟ್ಟರು ಹಾಯಸ್ಕೂಲ ವರ್ಗದ ವರೆಗೆ ಹುಡುಗ ಹುಡುಗೆಯರೆಂಬ ಭೇದವಿಲ್ಲದೆ ಎಲ್ಲ ವಿದ್ಯಾರ್ಥಿಗಳಿಗೂ ಹಿಂದೀ-ಉರ್ದು ಭಾಷೆಗಳನ್ನು ಮತ್ತು ನಾಗರಿ-ಪರ್ಶಿಯನ್ ಲಿಪಿಗಳನ್ನೂ ಒತ್ತಾಯದಿಂದ ಕಲಿಸುವ ಅವಶ್ಯಕತೆಯನ್ನು ಸಿದ್ಧಪಡಿಸುವ ಪ್ರಯತ್ನವನ್ನು ಈ ಪುಸ್ತಿಕೆಗಳಲ್ಲಿ ಮಾಡಲಾಗಿದೆ. ಈ ವಿಚಾರ ನನಗೆ ಪೂರ್ತಿಯಾಗಿ ಮೆಚ್ಚುಗೆಯಾಗಿದೆ. ನನ್ನ ಪ್ರಯತ್ನಗಳನ್ನೆಲ್ಲ ಯಾವಾಗಲೂ ಇದೇ ಗುರಿಯಿಟ್ಟುಕೊಂಡು ಸಾಗಿಸಿದ್ದೇನೆ. ಮೌಲಾನಾ ಹಜರತ ಮೊಹಾನಿಯವರೂ ಬಾಬೂ ಪುರುಷೋತ್ತಮದಾಸ ತಂಡನ್ನರೂ ಇದೇ ಧ್ಯೇಯಕ್ಕಾಗಿ ದುಡಿಯುತಿದ್ದ ಕಾಲವೊಂದಿತ್ತು. ಆದರೆ ವಿಧಿ ವಿಲಾಸ! ನಮಗೆ ಯಶಸ್ಸು ಸಿಕ್ಕಲಿಲ್ಲ. ಹೀಗಿದ್ದರೂ ನಾನು ಆಶೆಯನ್ನು ತ್ಯಜಿಸಲೂ ಇಲ್ಲ ಪ್ರಯತ್ನಗಳನ್ನು ಬಿಟ್ಟು ಕೊಡಲೂ ಇಲ್ಲ. ಇದರ ಪರಿಣಾಮವಾಗಿ ಹಿಂದುಸ್ತಾನಿ ಪ್ರಚಾರ ಸಭೆಯು ಉದಯವಾಯಿತು ಮೌಲವೀ ಸಾಹೇಬರ ವಿನಂತಿ ನನ್ನ ಮಟ್ಟಿಗೆ ಹೊಸದೇನೂ ಅಲ್ಲ.

ಯುಕ್ತಪ್ರಾಂತ ಸರಕಾರದವರು ಸಾರ್ವತ್ರಿಕ ಸಮ್ಮತಿಯಿಂದ, ಈ ದಿಸೆಯಲ್ಲಿ ಪ್ರಯತ್ನ ಮಾಡಬಲ್ಲರಾದರೆ ಅವರಿಂದ ದೊಡ್ಡ ಸೇವೆಯಾದಂತಾಗುವದು. ನನ್ನ ಅಭಿಪ್ರಾಯದಲ್ಲಿ, ಹಿಂದಿಯಾಗಲಿ ಉರ್ದುವಾಗಲಿ ಮಾತೃಭಾಷೆಯಾಗಿರುವ ಪ್ರಾಂತಗಳಲ್ಲೆಲ್ಲ ಒಂದನ್ನರಿತವರಿಗೆ ಇನ್ನೊಂದರ ಪರಿಜ್ಞಾನವನ್ನು ಒತ್ತಾಯದ್ದನ್ನಾಗಿ ಮಾಡುವದು ಅವಶ್ಯವಾಗಿದೆ. ಅಂಥ ಕ್ರಮದ ಸ್ವಾಭಾವಿಕ ಪರಿಣಾಮವಾಗಿ ಅವೆರಡು ಒಂದಾಗಿ ಎರಕಗೊಂಡು ಹಿಂದುಸ್ತಾನಿಯ ಸುಖಮಯ ಪ್ರಸವವಾಗುವದೆಂಬಲ್ಲಿ ನನಗೆ ಸಂದೇಹವಿಲ್ಲ. ಆಗ ಈ ಅಕ್ಕತಂಗಿಯರ ಜಗಳ ನಿಂತು ಹೋಗುವದು. ಈ ಕ್ರಮದ ಇನ್ನೊಂದು ಸತ್ಫಲವೆಂದರೆ, ಇಂಗ್ಲೀಷಿನ ಬದಲು ರಾಷ್ಟ್ರಭಾಷೆಯಲ್ಲಿಯೆ ಹಾಯಸ್ಕೂಲವರೆಗಿನ ಶಿಕ್ಷಣ ಸಾಗುವದು.

ಮುಸೂರಿ — ಮೋ. ಕ. ಗಾಂಧಿ
೫-೬-೪೬ — [ಹರಿಜನ ಸೇವಕದಿಂದ]

---

## ಆಸಾಮದಲ್ಲಿ ಕಸ್ತೂರಬಾ ಕಾರ್ಯ

ಶ್ರೀಮತಿ ಅಮಲ ಪ್ರಭಾ ಇವಳು ಸರೇನಿಯಾದಲ್ಲಿಯ ತನ್ನ ಕೆಲಸದ ಬಗ್ಗೆ ಬರೆದ ವರದಿಯ ಮುಖ್ಯಾಂಶ :—

ಹಳ್ಳಿಯ ಹದಿನಾರು ಬಾಲಿಕೆಯರು ಅವರಲ್ಲಿ ಹೆಚ್ಚಾಗಿ ಶಿಕ್ಷಕೆಯರು ಶಿಕ್ಷಣ ಪಡೆಯುತಿರುವರು. ಅವರಲ್ಲಿಬ್ಬರು ಹರಿಜನರಿರುವರು. ಇಬ್ಬರು ಕಾಯಂ ಶಿಕ್ಷಕೆಯರಿದ್ದು ಅವರು ಈ ಹೆಣ್ಣು ಹುಡಿಗೆಯರ ಜೊತೆಯಲ್ಲಿಯೇ ಇದ್ದು ಅವರ ಜೀವನದಲ್ಲಿ ತಾವೂ ಪಾಲುಗಾರರಾಗಿರುವರು. ಈ ಶಿಕ್ಷಕೆಯರ ಮತ್ತು ಶ್ರೀಮತಿ ಅಮಲ ಪ್ರಭಾ ಇವರ ನೇತೃತ್ವದಲ್ಲಿ ಬಾಲಿಕೆಯರೆ ಮನೆಯ ಮತ್ತು ಅಡುಗೆಯ ಎಲ್ಲ ಕೆಲಸ ಮಾಡುವರು. ಸ್ವಲ್ಪ ದೂರ ಮತ್ತು ಎತ್ತರದ ಸ್ಥಳದಿಂದ ತರಬೇಕಾದ ನೀರಿಗಾಗಿ ಮಾತ್ರ ಎರಡನೆಯವರ ಸಹಾಯವನ್ನು ತೆಗೆದುಕೊಳ್ಳಲಾಗುತಿದೆ.

ಮೂಗಾ ರೇಶಿಮೆ ತೋಡುವ ಮತ್ತು ನೇಯುವ ಕೈಗಾರಿಕೆ ಕೆಲಸವೆ ಮುಖ್ಯವಾಗಿತ್ತು. ಈ ಕೆಲಸವನ್ನು ಹೊಸದಾಗಿ ಪ್ರಾರಂಭಿಸಿದ್ದರಿಂದ ಮೊದಲಿನ ೧॥ ತಿಂಗಳಲ್ಲಿ ಬಹಳ ಸ್ವಲ್ಪ ಅರಿವೆ ಸಿದ್ಧವಾಯಿತು. ಆದರೂ ೩೦ ರೂಪಾಯಿಗಳಿಗಿಂತ ಹೆಚ್ಚಿನ ಬೆಲೆಯ ಬಟ್ಟೆ ಸಿದ್ಧವಾಯಿತು. ೧೨೦ ರೂಪಾಯಿಗಳಿಗಿಂತ ಹೆಚ್ಚು ಬೆಲೆಯ ನೂಲನ್ನು ಮೊದಲೇ ಕೊಟ್ಟದ್ದಾಗಿದೆ. ಹಣಿಗೆಗಳ ಬೆಲೆಯನ್ನು ಕಳೆದುದಾದರೆ ೮೨ ರೂಪಾಯಿ ನಿಕ್ಕಿ ಉಳಿದಂತಾಯಿತು. ನೂಲಿನ ಖಾದಿಯನ್ನೂ ಸಿದ್ಧಪಡಿಸಲಾಗುತ್ತದೆ. ಮತ್ತು ಬಾಲಿಕೆಯರಿಗೆ ಅದರ ಎಲ್ಲ ವಿಧಾನಗಳನ್ನು ಕಲಿಸಲಾಗುತ್ತದೆ. ತೋಟಪಟ್ಟಿ ಕೆಲಸವನ್ನೂ ಕಾರ್ಯಕ್ರಮದಲ್ಲಿ ಸೇರಿಸಿದ್ದಾಗಿದೆ. ಫೆಬ್ರುವರಿ ತಿಂಗಳಲ್ಲಿ ೩೫ ಸೇರು ಕಾಯಿಪಲ್ಲೆಗಳನ್ನು ಉತ್ಪಾದಿಸಲಾಯಿತು. ಶಾರೀರಿಕ ತಾಲೀಮು ನಿತ್ಯಶಃ ಶಿಕ್ಷಣದ ಒಂದು ಅಂಗವಾಗಿಯೇ ಇದೆ. ವಾರಕ್ಕೊಮ್ಮೆ ಬಾಲಿಕೆಯರು ಹಳ್ಳಿಗೆ ಹೋಗಿ ಅಲ್ಲಿ ಜನತೆಗೆ ಸೇವೆ ಸಲ್ಲಿಸುವರು.

ಹಿಂದುಸ್ತಾನಿ, ಆಹಾರದ ಬಗ್ಗೆ ಪ್ರಾಥಮಿಕ ಜ್ಞಾನ, ಅಡುಗೆ ಮತ್ತು ತೋಟಪಟ್ಟಿ, ಆರೋಗ್ಯ ವಿಧಾನ, ಸ್ವಚ್ಛತೆ ಮತ್ತು ವಿಧಾಯಕ ಕಾರ್ಯಕ್ರಮದ ತತ್ವಗಳ ಬಗ್ಗೆ ವರ್ಗಗಳಲ್ಲಿ ನಿತ್ಯಶಃ ಕಲಿಸಲಾಗುತ್ತದೆ. ಹೊರಗಿನ ಕೆಲ ಗೆಳೆಯರು ವ್ಯಾಖ್ಯಾನಗಳ ಮೂಲಕ ಸಹಾಯ ಮಾಡಿರುವರು.

ಆಹಾರವು ಸಾದಾ ಇದ್ದರೂ ಆರೋಗ್ಯಕರವಾಗಿದೆ. ರೇಶಿಮೆ ತೋಡುವ ಯಂತ್ರಗಳು ಮತ್ತು ಮಗ್ಗಗಳು ಹೆಚ್ಚಾದ್ದರಿಂದ ಬಟ್ಟೆಯ ಸಂಬಂಧದಲ್ಲಿ ಬೇಗನೆ ಸ್ವಾವಲಂಬಿಯಾಗಬಹುದೆಂದು ಆಶಿಸಲಾಗಿದೆ.

## ಮನೋರಂಜಕ ಪ್ರಶ್ನೋತ್ತರ

ಖಾದೀ ಕಾರ್ಯಕರ್ತರೊಬ್ಬರು ಬರೆಯುತ್ತಾರೆ. ಖಾದೀ ಭಾಂಡಾರದ ವ್ಯವಸ್ಥಾಪಕ ಮತ್ತು ಕೆಲ ಗಿರಾಕಿಗಳಲ್ಲಿ ಇತ್ತೀಚೆ ನಡೆದ ಪ್ರಶ್ನೋತ್ತರಗಳನ್ನು ಕೆಳಗೆ ಕೊಡುತ್ತೇನೆ. ಇಂಥವರಿಗೆ ಖಾದಿಯನ್ನು ಮಾರಬೇಕೆ?

ಪ್ರಶ್ನೆ— ಇದು ನೀವು ನೂತ ನೂಲೇ?

ಉತ್ತರ— ಅಲ್ಲ. ೧೦ ರೂಪಾಯಿಗಳಿಗೆ ನಾನು ಈ ೮ ಲಡಿಗಳನ್ನು ಕೊಂಡಿರುವೆನು.

ಪ್ರಶ್ನೆ— ಎರಡನೇ ಗಿರಾಕಿಗೆ 'ಇಷ್ಟೆಲ್ಲ ನೂಲು ತೆಗೆಯಲು ನೀವು ಸಮರ್ಥರಿರುವಿರೊ?

ಉತ್ತರ— ಇಲ್ಲ. ನನ್ನ ಮಗಳು ಇದನ್ನೆಲ್ಲ ನೂತಿರುವಳು. ೧೨ ಆಣೆಗೆ ಒಂದು ಲಡಿಯಂತೆ ನಾವು ನೂಲು ಮಾರುತಿರುವೆವು ಕೂಡ.

ಪ್ರ— ಮೂರನೆಯವನಿಗೆ; 'ಅವಶ್ಯಕ ನೂಲು ಕೊಡದಿದ್ದರೆ ನೀವು ಖಾದಿ ಕೊಳ್ಳಲಾರಿರಿ.

ಉ— ಆಗಲಿ. ಏನೂ ಚಿಂತೆಯಿಲ್ಲ. ನನಗೆ ನೂಲು ಸಿಕ್ಕುವ ವರೆಗೆ ನಾನು ಅನಧಿಕೃತ ಖಾದಿಯನ್ನು ಕೊಳ್ಳುವೆನು.

ಪ್ರ— ನಾಲ್ಕನೆಯವನಿಗೆ; 'ನೀವು ಖಾದಿ ಕೊಳ್ಳುವುದೇಕೆ?

ಉ— ಅದನ್ನು ಸಂಪಾದಿಸುವದು ಸುಲಭವಾಗಿದ್ದೆಂದು.

ಪ್ರ— ಐದನೆಯವನಿಗೆ; ನೀವು ಸತತ ಖಾದಿಧಾರಿಗಳಲ್ಲ. ನೀವು ಕೊಂಡ ಖಾದಿಯನ್ನು ಏನು ಮಾಡುವಿರಿ?

ಉ— ಇಂದು ಖಾದಿಯೆಂದರೆ ಒಳ್ಳೆ ಭೂಷಣದ ಬಟ್ಟೆಯಾಗಿ ಪರಿಣಮಿಸಿದೆ.

ಪ್ರ— ಆರನೆಯವನಿಗೆ; ನೀವು ಸ್ವತಃ ನೂಲು ತೆಗೆಯುವದಿಲ್ಲ. ಅಂದ ಬಳಿಕ ಈ ನೂಲು ಎಲ್ಲಿಂದ ದೊರೆಯುವದು.

ಉ— ನನ್ನ ಗೆಳೆಯನೊಬ್ಬನು ಯಾವಾಗಲೂ ನನಗೆ ನೂಲು ಕೊಡುತಿರುವನು.

ಪ್ರ— ಏಳನೆಯವನಿಗೆ; ನೀವು ಯಾವಾಗಲೂ ರೇಶಿಮೆಯ ಬಟ್ಟೆಯನ್ನೂ ಉಣ್ಣೆಯಬಟ್ಟೆಯನ್ನೂ ಧರಿಸುವದೇಕೆ?

ಉ— ಏಕೆಂದರೆ ಅವುಗಳಿಗೆ ನೂಲನ್ನು ಕೊಡಬೇಕಾಗಿಲ್ಲ.

ಪ್ರ— ಎಂಟನೆಯವನಿಗೆ; ನೀನು ಬಹಳ ಖಾದಿ ಕೊಂಡಿರುವಿ. ಇದನ್ನೆಲ್ಲ ತೆಗೆದುಕೊಂಡು ಮಾಡುವಿಯೇನು?

ಉ— ಎರಡು ಮೂರು ವರುಷ ನನಗೆ ಇದು ಬರುವದು. ಅನಂತರ ನನಗೆ ಖಾದಿ ಸಿಕ್ಕುವದೊ ಇಲ್ಲವೊ ನೋಡಬೇಕು.

ಮೇಲ್ಕಿನ ಪ್ರಶ್ನೆ ಮತ್ತು ಉತ್ತರ ಬೋಧಪ್ರದವಾಗಿವೆ. ಖಾದೀ ಸಂಬಂಧದಲ್ಲಿ ತೆಗೆದುಕೊಂಡ ಹೊಸ ಧೋರಣವು ಸರಿಯಿದ್ದರೆ, ಖಾದೀ ಗಿರಾಕಿಗಳು ಮೇಲೆ ಉಲ್ಲೇಖಿಸಿದಂಥವರಿದ್ದರೆ, ಕಾಂಗ್ರೆಸ ಘಟನೆಯಲ್ಲಿದ್ದ ಖಾದಿ ಕಲಮನ್ನು ಕಿತ್ತಿ ಹಾಕುವ ಆವಶ್ಯಕತೆ ಸಿದ್ಧವಾಗುತ್ತದೆ. ಈ ಪ್ರಶ್ನೋತ್ತರಗಳು ಎಂಟು ಜನ ಗಿರಾಕಿಗಳಿಗೆ ಸಂಬಂಧಿಸಿದ್ದು ಮಹತ್ವದ ಸಂಗತಿಯಾಗಿದೆ. ಚರಖಾ ಸಂಘದವರು ಈ ಎಂಟು ಜನರಲ್ಲಿ ಒಬ್ಬರ ಬೇಡಿಕೆಯನ್ನಾದರೂ ಪೂರಯಿಸುವ ಆವಶ್ಯಕತೆಯಿಲ್ಲ. ಚರಖಾ ಸಂಘ ಕೇವಲ ಬಡವರಿಗಾಗಿದೆ. ಖಾದಿ ಧಾರಿಗಳು ಬಡವರ ಸಲುವಾಗಿಯಾದರೂ ಹಾಗೆ ಮಾಡುತ್ತಾರೆ. ಇಲ್ಲವೆ ಸ್ವರಾಜ್ಯ ಸಂಪಾದನೆಗಾಗಿ ಅಥವಾ ಎರಡೂ ಉದ್ದೇಶಗಳಿಗಾಗಿ. ಮೇಲೆ ಉಲ್ಲೇಖಿಸಿದ ಎಂಟೂ ಗಿರಾಕಿಗಳು ಇವುಗಳಲ್ಲಿ ಯಾವುದನ್ನೂ ಸರಿಯಾಗಿಟ್ಟುಕೊಂಡಿಲ್ಲ. ಖಾದಿಯ ಧ್ಯೇಯವು ಸತ್ಯಪೂರ್ಣವಾಗಿದೆಂಬದನ್ನು ಚರಖಾ ಸಂಘ ಸಿದ್ಧಪಡಿಸಬೇಕಿದ್ದರೆ ಅವರು ಹೊಸ ಧೋರಣಕ್ಕೆ ನಿಷ್ಠರಾಗಿರಬೇಕು. ಖಾದೀ ಮಾರಾಟದ ಅಂಗಡಿಗಳನ್ನು ಮುಚ್ಚಬೇಕಾದ ಪ್ರಸಂಗ ಬಂದರೂ ಅದಕ್ಕೆ ಹೆದರಬೇಕಾಗಿಲ್ಲ. ಹಿಂದಿನ ತಪ್ಪನ್ನು ಸರಿಪಡಿಸಬೇಕಾಗಿದ್ದರೆ ಬಂದುದನ್ನೆಲ್ಲ ಸಹಿಸುವ ಸಾಮರ್ಥ್ಯ ಅವರಲ್ಲಿರಲಿಕ್ಕೆಬೇಕು.

ಖಾದೀ ಭಾಂಡಾರ ವ್ಯವಸ್ಥಾಪಕರು ಹೆಚ್ಚು ಜಾಗ್ರತರಾಗಿರಬೇಕೆಂಬುದನ್ನು ಮೇಲಿನ ಸಂವಾದವು ಎಚ್ಚರಿಸುತ್ತದೆ. ಖಾದೀ ಶಾಸ್ತ್ರದಲ್ಲಿ ಅವರು ಪರಿಣತರಾಗಬೇಕು, ಒಳ್ಳೆ ತಾಳ್ಮೆಯಿಂದ ಮತ್ತು ನಮ್ರತೆಯಿಂದ ಗಿರಾಕಿಗಳಿಗೆ ಖಾದಿ ಶಾಸ್ತ್ರದಲ್ಲಿ ಅಡಕವಾಗಿರುವ ಮಹಾ ತತ್ವವನ್ನು ಕಲಿಸಲು ಸಿದ್ಧರಾಗಿರಬೇಕು. ಇದಕ್ಕೆ ಸ್ವಲ್ಪಕಾಲ ಹತ್ತಬಹುದು. ಆದರೂ ಇದನ್ನು ಮಾಡುವದು ಅವಶ್ಯ. ಖಾದಿಯಲ್ಲಿ ನಮಗೆ ವಿಶ್ವಾಸವಿದ್ದರೆ ನಾವು ಒಳ್ಳೆದಾರ್ಢ್ಯದಿಂದಿದ್ದು ಆ ಬಗೆಯ ವಿಶ್ವಾಸವನ್ನು ಎರಡನೆಯವರಲ್ಲಿ ಹುಟ್ಟಿಸಬೇಕು. ಆದರೆ ಕೆಲಸಗಾರರಲ್ಲಿಯೆ ವಿಶ್ವಾಸವಿಲ್ಲದಿದ್ದರೆ ಖಾದಿಯ ಬಗ್ಗೆ ಇಷ್ಟೆಲ್ಲ ಹೇಳಿಕೊಳ್ಳುವುದು ನಿರರ್ಥಕ.

ನಡೆದ ಪ್ರಶ್ನೋತ್ತರಗಳೆಲ್ಲ ಇದ್ದಕ್ಕಿದ್ದ ಹಾಗೆ ವರದಿ ಮಾಡಲ್ಪಟ್ಟವೆಂದು ನಾನು ಗ್ರಹಿಸಿಕೊಂಡಿದ್ದೇನೆ.

ಮಸೂರಿ — ಮೋ. ಕ ಗಾಂಧಿ

೧—೬—೪೬ — (ಹರಿಜನ ಸೇವಕದಿಂದ)

## ಉರ್ದು ಉಭಯತರ ಭಾಷೆಯೇ?

ಒಬ್ಬ ಹಿಂದೀ ವಿದ್ವಾಂಸ ಬರೆಯುತ್ತಾನೆ :

೧. "ಪ್ರತಿಯೊಬ್ಬ ಹಿಂದೀಯನು, ವಿಶೇಷವಾಗಿ ನಿಮಗೆ ದಿನದಿನವೂ ಸ್ವಾಭಾವಿಕವಾಗಿ ಹೆಚ್ಚು ಸಂಪರ್ಕ ಬರುತ್ತಿರುವ ಹಿಂದೂಗಳು, ಉರ್ದೂ ಕಲಿಯುವಂತೆ ಮಾಡಬೇಕೆಂದು ನೀವು ಮಹಾ ಪ್ರಯತ್ನ ಮಾಡುತಿರುವಿರಿ. ಅದೇ ಪ್ರಕಾರ ಯಾವನಾದರೂ ಮುಸ್ಲಿಮನು,ಮುಸ್ಲಿಂರು ಹಿಂದೀ ಕಲಿಯುವಂತೆ ಪ್ರಯತ್ನ ಮಾಡುತಿದ್ದಾನೆಯೆ? ಇಲ್ಲದಿದ್ದರೆ, ಇದರ ಪರಿಣಾಮವಾಗಿ ಉರ್ದುವೇ ಉಭಯ ಜಾತಿಗಳ ಭಾಷೆಯಾಗಿಬಿಟ್ಟು ಹಿಂದೀ ಮಾತ್ರ ಕೇವಲ ಹಿಂದುಗಳ ಮಾಧ್ಯಮವಾಗಿ ಬಿಡಲಿಕ್ಕಿಲ್ಲವೆ? ಇದು ಹಿಂದೀಗೆ ಅಪಕಾರವಲ್ಲವೆ?

೨. "ಹಿಂದುಸ್ತಾನಿ ಪ್ರಚಾರ ಸಭೆಯ ಪುಸ್ತಕಗಳಲ್ಲಿ ಹಿಂದೀ ಶಬ್ದಗಳ ಉರ್ದೂ ಪರ್ಯಾಯವಾಚಿಯನ್ನು ಯಾವಾಗಲೂ ಕಂಸಿನಲ್ಲಿ ಕೊಡುತ್ತಾರೆ. ಆದರೆ ಉರ್ದೂ ಶಬ್ದಗಳ ಹಿಂದೀ ಪರ್ಯಾಯಗಳನ್ನು ಕೊಡುವದಿಲ್ಲ. ಇದು ಹಿಂದೂಗಳಿಗೆ ಉರ್ದುವನ್ನು ಬಲವಂತದಿಂದ ಕಲಿಸುವ ಇಚ್ಛೆಯ ದ್ಯೋತಕವಲ್ಲವೆ?

೩. "ಈ ಪುಸ್ತಕಗಳಲ್ಲಿ ಪ್ರಯೋಗಿಸಲ್ಪಡುವ ಪರ್ಶಿಯನ್ ಮತ್ತು ಅರಬ್ಬೀ ಶಬ್ದಗಳಿಗೆ ಲೆಕ್ಕವೇ ಇಲ್ಲ. ಸಾಮಾನ್ಯ ಜನರಿಗೆ ಇವು ಅರ್ಥವಾಗುವವೆಂದು ನಿಮ್ಮ ತಿಳಿವಳಿಕೆಯೆ ? ಉದಾಹರಣೆಗಾಗಿ ಅದಬ, ಆದಾಬ, ಎತಕಾದ.

೪. "ಹಿಂದುಸ್ತಾನಿಯೊಂದು ಭಾಷೆಯೆ ನಿಜವಾದರೆ, ನಿಮ್ಮ ಶೈಕ್ಷಣಿಕ ಪುಸ್ತಕಮಾಲೆಗಳ ಹಿಂದೀ ಮತ್ತು ಉರ್ದು ಸಂಸ್ಕರಣಗಳ ಪರಿಭಾಷೆಗಳಲ್ಲಿ ಇಷ್ಟು ಹೆಚ್ಚುಕಡಿಮೆಯೇಕೆ ?

೫. "ನನ್ನ ಭಯವಿಷ್ಟೆ: ಈ ವರೆಗೆ ಹಿಂದೀ ಭಾಷೆಯನ್ನು ಕಲಿಯಲು ಪ್ರಯತ್ನಿಸುತಿದ್ದ ಲಕ್ಷಾಂತರ ದಕ್ಷಿಣ ಭಾರತೀಯರು ಉರ್ದೂ ಲಿಪಿಯನ್ನು ನೋಡಿ ಭಯಪಟ್ಟುಕೊಂಡು ಎರಡನ್ನೂ ಕಲಿಯದೆ ಬಿಟ್ಟುಬಿಡುವರು. ಆಗ ಈವರೆಗೆ ಹಿಂದುಸ್ತಾನಿ ಪ್ರಚಾರ ಸಭೆಯವರು ಮಾಡಿದ ಕೆಲಸವೆಲ್ಲ ಪೂರ್ಣ ಅಳಿಸಿಹೋಗುವದು."

೧. ಉರ್ದೂ ಶಬ್ದರೂಪಗಳೊಡನೆ ಅಪರಿಚಿತರಾದವರು ಅವುಗಳನ್ನು ಕಲಿಯುವಂತೆ ಮಾಡಬೇಕೆಂದೂ ಹಾಗೆಯೆ ಹಿಂದೀ ರೂಪವರಿಯದವರು ಅದನ್ನು ಕಲಿಯುವಂತೆ ಮಾಡಬೇಕೆಂದೂ ಪ್ರಯತ್ನಗಳು ನಡೆದಿವೆ. ನನಗೆ ಹೆಚ್ಚಾಗಿ ಸಂಪರ್ಕ ಬರುವದು ಹಿಂದೀ ಬಲ್ಲ ಹಿಂದುಗಳೊಡನೆ ಎಂಬ ಮಾತು ನಿಜ. ಆದರೆ ಅದರಿಂದ ನಾನು ಚಿಂತಿತನಾಗುವದಿಲ್ಲ. ಹಿಂದೂಗಳು ತಮ್ಮ ಹಿಂದೀಯನ್ನು ಮರೆಯುವ ಸಂಭವ ಕಡಿಮೆ. ವಸ್ತುತಃ ಅವರ ಹಿಂದೀಗೆ ಉರ್ದೂವಿನ ಪರಿಜ್ಞಾನದಿಂದ ಇನ್ನಷ್ಟು ಓಜಸ್ಸು ಬರುವದೆಂದು ನನ್ನ ನಂಬಿಕೆ. ಹಿಂದೀಯರಲ್ಲಿ ಬಹುಸಂಖ್ಯಾಕರು, ಅವರು ಹಿಂದುಗಳೇ ಇರಲಿ ಮುಸ್ಲಿಮರೇ ಇರಲಿ, ಸಂಸ್ಕೃತ ಶಬ್ದ ಬಾಹುಲ್ಯವುಳ್ಳ ತಮ್ಮ ಪ್ರಾಂತಗಳ ಭಾಷೆಗಳನ್ನೇ ಎಲ್ಲಕ್ಕಿಂತ ಚನ್ನಾಗಿ ಬಲ್ಲರು. ಸ್ವತಃ ನನಗೆ ನನ್ನ ಪ್ರಯತ್ನಗಳ ಫಲವಾಗಿ ಎಲ್ಲರೂ ಹಿಂದೀಯನ್ನು ದೂರೀಕರಿಸಿ ಉರ್ದೂ ಕಲಿಯುವರೆಂಬ ಭಯವೂ ಇಲ್ಲ. ಹಾಗೆ ಆಗಬೇಕೆಂಬ ಬಯಕೆಯೂ ಇಲ್ಲ. ಬಯಸಲಿ ಬಿಡಲಿ, ಸ್ವಾಭಾವಿಕವಾಗಿರುವದಾವುದೋ ಅದು ಆಗೇತೀರುವದು. ಒಂದು ರಾಷ್ಟ್ರೀಯ ಭಾಷೆಯ ಎರಡು ಶೈಲಿಗಳನ್ನು ಎರಕ ಹೊಯ್ಯಲು ಮಾಡುವ ಪ್ರಯತ್ನಗಳು ಎಲ್ಲ ಬಗೆಯಿಂದಲೂ ಯೋಗ್ಯ ಉಪಕ್ರಮವೆಂದು ನನ್ನ ಅಭಿಪ್ರಾಯ.

೨. ನಾನು ಹಿಂದುಸ್ತಾನಿ ಪ್ರಚಾರ ಸಭೆಯ ಎಲ್ಲ ಪುಸ್ತಕಗಳನ್ನು ಓದಿಲ್ಲ. ಕೆಲವು ಹಿಂದೀ ಶಬ್ದಗಳಿಗೆ ಉರ್ದೂ ಪರ್ಯಾಯಗಳನ್ನು ಕಂಸಿನಲ್ಲಿ ಕೊಟ್ಟಿದ್ದರೆ ಅದು ಸ್ತುತ್ಯವೇ ಸರಿ. ಆ ಪುಸ್ತಕಗಳ ಲೇಖಕರ ಅಭಿಪ್ರಾಯದಲ್ಲಿ ಆ ಶಬ್ದಗಳು ಸಾಮಾನ್ಯವಾಗಿ ಪರಿಚಿತವಾಗಿಲ್ಲವೆಂದಿಷ್ಟೇ ಇದರ ಅರ್ಥವಾಗುತ್ತದೆ. ಉರ್ದೂ ಶಬ್ದಗಳ ಹಿಂದೀ ಪರ್ಯಾಯವನ್ನು ಕೊಟ್ಟಿಲ್ಲವಾದರೆ ಅವು ಹಿಂದೀಯಲ್ಲಿ ದಿನಬಳಕೆಗೆ ಬಿದ್ದುಬಿಟ್ಟಿವೆಯೆಂದಿಷ್ಟೇ ಸೂಚಿತವಾಗುವದು. ಪ್ರಸ್ತುತ ಪತ್ರಲೇಖಕನಂಥ ವಿದ್ವಾಂಸನ ಮನಸ್ಸಿನಲ್ಲಿ ಇಂಥ ಶಂಕೆಗಳು ಮೂಡುವದು ವಿಷಾದಕರ. ಶಂಕೆಗಳು ವಿದ್ವತ್ತೆಯ ಲಕ್ಷಣಗಳಲ್ಲೊಂದಲ್ಲ.

೩. ಈ ಆರೋಪ ಸರಿಯಾದುದೆಂದು ತೋರುವದಿಲ್ಲ. ಅದು ಸತ್ಯವೇ ಎಂದಿಟ್ಟುಕೊಂಡರೂ ಯಾವದೇ ಭಾಷೆಯಲ್ಲಿ ಹೊಸ ಶಬ್ದಗಳನ್ನು ತಂದರೆ ಅದರಿಂದ ಆ ಭಾಷೆಯ ಶ್ರೀ ಹೆಚ್ಚುತ್ತದೆ. ನಾರ್ಮನ್ ಆಕ್ರಮಣದ ನಂತರ ಇಂಗ್ಲೀಷ ಭಾಷೆಯಲ್ಲಿ ಸೇರಿಕೊಂಡ ಲ್ಯಾಟಿನಜನ್ಯ ಶಬ್ದಗಳು ಆ ಭಾಷೆಯ ಸತ್ವವನ್ನು ಬೆಳಸಿದವು. ಒಳಿತಲ್ಲದುದು, ಅವಶ್ಯವಲ್ಲದುದು ಅಥವಾ ಒತ್ತಾಯದಿಂದ ತುಂಬಿದ್ದು ಕೊನೆಗೆ ಉಳಿಯಲಿಲ್ಲ. ಪತ್ರಲೇಖಕನು ಉದಾಹರಿಸಿದ ಶಬ್ದಗಳು ಉತ್ತರ ದೇಶದಲ್ಲಿ ಎಲ್ಲ ಹಿಂದೀಪ್ರೇಮಿಗಳಿಗೂ ಪರಿಚಿತವಾಗಿವೆ. ಅವು ಹಿಂದೀಯಲ್ಲಿ ಉಚಿತವಾದ ಸ್ಥಾನವನ್ನು ಪಡೆದಿವೆ. ದಕ್ಷಿಣ ಭಾರತೀಯರಿಗೆ ಅವು ಹೊಸವೆಂಬುದು ನಿಜ. ಆದ್ದರಿಂದ ಅವುಗಳ ಸಂಸ್ಕೃತ ಪರ್ಯಾಯವಾಚಿಯನ್ನು ಕೊಡಬೇಕು, ಕೊಡಲಾಗುತ್ತಿದೆ. ನಿಜ ಹೇಳಬೇಕಾದರೆ, ಹಿಂದುಸ್ತಾನಿ ಪ್ರಚಾರ ಸಭೆಗೆ ಒಂದರ ಬಗ್ಗೆ ವೈರವಾಗಲಿ ಇನ್ನೊಂದರ ಕಡೆ ಪಕ್ಷಪಾತವಾಗಲಿ ಇಲ್ಲ. ಎರಡೂ ರೂಪಗಳು ಇದ್ದೇ ಇವೆ. ಅವು ಇರತಕ್ಕವುಗಳೆ. ಇದರಿಂದ ಏನೂ ತೊಡಕು ಬರಬಾರದು. ಆದರೆ ಇವೆರಡರ ನಡುವೆ ವೈಷಮ್ಯ, ಅಸೂಯೆಗಳಿದ್ದರೆ ಹಿಂದುಸ್ತಾನಿ ಅಸ್ತಿತ್ವಕ್ಕೆ ಬರಲಾರದೆಂಬದು ನಿಶ್ಚಯ. ಅಂಥ ಘಟನೆ ಘಟಿಸಿದರೆ ಹಿಂದುಸ್ತಾನಕ್ಕೆ ಕೇಡೇ ಸರಿ.

೪. ಒಂದಾನೊಂದು ಕಾಲದಲ್ಲಿ ಹಿಂದುಸ್ತಾನಿ ಅಸ್ತಿತ್ವದಲ್ಲಿತ್ತು. ಅದನ್ನು ಹಿಂದೀ ಉರ್ದುಗಳ ಗಳ ವಿವೇಕಯುಕ್ತ ಸಂಮಿಶ್ರಣದಿಂದ ಪುನರುಜ್ಜೀವಿಸಿ ಆ ಮೂಲಕ ಅದು ಬೆಳೆಯುವಂತೆ ಮಾಡುವದೇ ಪ್ರಕೃತ ಪ್ರಯತ್ನದ ಗುರಿ. ಹಿಂದೀಪ್ರೇಮಿಗಳಾಗಲಿ ಉರ್ದುಪ್ರೇಮಿಗಳಾಗಲಿ ಇದರಿಂದ ದುಃಖಗೊಳ್ಳಲಾರರು. ಹಿಂದೀ ಉರ್ದುಗಳು ಅಕ್ಕತಂಗಿಯರು. ಆದುದರಿಂದ ಅವೆರಡು ಬೆರೆತರೆ ಬಾಧಕವೇನು? ಈ ಮಧ್ಯ ಅವಸ್ಥೆಯಲ್ಲಿ ಹಿಂದೀ ಮತ್ತು ಉರ್ದೂ ಪುಸ್ತಕಗಳ ಪರಿಭಾಷೆಗಳಲ್ಲಿ ಭಿನ್ನತೆಯಿದ್ದರೆ ಆಶ್ಚರ್ಯಕ್ಕೆ ಕಾರಣವಿಲ್ಲ.

೫. ನನ್ನ ಅನುಭವ ಈ ಪತ್ರಲೇಖಕನ ಅಭಿಪ್ರಾಯಕ್ಕಿಂತ ತೀರ ಭಿನ್ನವಾಗಿದೆ. ಉರ್ದೂ ಲಿಪಿಯನ್ನು ಕಲಿಯಬೇಕೆಂದು ಒತ್ತಾಯ ಪಡಿಸಿದ್ದರಿಂದ ಎರಡೂ ಲಿಪಿಗಳನ್ನು ಕಲಿಯದೆ ಬಿಟ್ಟವರೊಬ್ಬರನ್ನೂ ನಾನು ಕಂಡರಿಯೆ; ಮಾತ್ರವಲ್ಲ, ಎಂದಾದರೂ ಹೀಗಾದೀತೆಂಬ ಭಯವೂ ನನಗಿಲ್ಲ.

ಈ ಲೇಖಕನು ತನ್ನನ್ನು ಮುತ್ತಿರುವ ಪೂರ್ವಗ್ರಹಗಳನ್ನು ಹರಿದೊಗೆಯಬೇಕೆಂದು ನನ್ನ ಬಿನ್ನಹ.

ಮಸೂರಿ — ಮೊ. ಕ. ಗಾಂಧಿ

೪—೬—೪೬

(ಹರಿಜನ ಸೇವಕದಿಂದ)

## ಕಾಸನ್ನುಳಿಸಿರಿ

ಶಾಸನ ಸಭೆಗಳ ಸನ್ಮಾನ್ಯ ಸದಸ್ಯರು ಖಾಸಗಿ ಕೆಲಸಕ್ಕೆ ಕೂಡ ಬಹಳ ಬೆಲೆಯ ಕಾಗದಗಳನ್ನುಪಯೋಗಿಸುತಿರುವರೆಂಬುದು ನನಗೆ ಕಂಡು ಬಂದಿದೆ. ನನಗೆ ತಿಳಿದ ಮಟ್ಟಿಗೆ ಕಚೇರಿಯಲ್ಲಿಯ ಕಾಗದಗಳನ್ನು ಹೊರಗೆ ಒಯ್ಯಲು ಬರುವುದಿಲ್ಲ. ಕಚೇರಿಗಳಲ್ಲಿ ಕೂಡ ಖಾಸಗಿ ಕೆಲಸಕ್ಕಾಗಿ ಅವನ್ನುಪಯೋಗಿಸಲಾಗದು. ಆಪ್ತೇಷ್ಟರಿಗೆ ಇಲ್ಲವೆ ತಮ್ಮ ಮತದಾರ ಕ್ಷೇತ್ರಗಳಲ್ಲಿರುವ ಜನರಿಗೆ ಖಾಸಗಿ ಪತ್ರಗಳನ್ನು ಬರೆಯಲಾಗದು. ಜಗತ್ತಿನ ಪ್ರತಿಯೊಂದು ಭಾಗದಲ್ಲಿ ಈ ಆಕ್ಷೇಪವು ಸಾರ್ವತ್ರಿಕವಾಗಿದೆಂಬುದೂ ನನಗೆ ತಿಳಿದಿದೆ. ಆದರೆ ಈ ಬಡ ದೇಶದಲ್ಲಿ ನನ್ನ ಆಕ್ಷೇಪ ಇದಕ್ಕೂ ಹೆಚ್ಚಾಗಿದೆ. ನಾನು ಉಲ್ಲೇಖಿಸಿದ ಸ್ಟೇಶನರಿ ಸಾಮಾನಗಳು ನಮಗೆ ಬಹಳ ಭಾರದವಾಗಿವೆ. ಜಗತ್ತಿನ ಬಹು ವೆಚ್ಚದ ದೇಶನಿವಾಸಿಗಳಾದ ಇಂಗ್ಲಿಶ್‌ರು ನಮ್ಮಲ್ಲಿ ಒಂದು ಬಗೆಯ ಭೀತಿಯನ್ನುಂಟು ಮಾಡಿ ತಮ್ಮ ಬೇಳೆ ಬೆಯಿಸಿಕೊಳ್ಳಬಯಸಿ ಈ ಭಾರೀ ವೆಚ್ಚದ ಮತ್ತು ಭವ್ಯ ಕಚೇರಿಗಳನ್ನು ಮತ್ತು ಬಂಗಲೆಗಳನ್ನು ರಚಿಸಿದರು. ಅವುಗಳನ್ನು ಸ್ವಚ್ಛವಿಡಲು ಕೆಲಸಗಾರರ ತಂಡವೇ ಬೇಕಾಗುತ್ತದೆ. ಅವರ ಮಾದರಿಯನ್ನು ಮತ್ತು ರೂಢಿಯನ್ನು ನಾವು ಇಟ್ಟುಕೊಂಡರೆ ನಾವು ನಾಶ ಹೊಂದುವೆವಲ್ಲದೆ ಹಿಂದುಸ್ತಾನವನ್ನೆ ರಸಾತಳಕ್ಕೊಯ್ಯುವೆವು. ವಿಜಯಿಗಳ ಸಂದರ್ಭದಲ್ಲಿ ಯಾವದನ್ನು ಸಹಿಸಲಾಗುತಿದ್ದಿತೋ ಅದನ್ನು ನಮ್ಮ ಸಂದರ್ಭದಲ್ಲಿ ಸಹಿಸಲಾಗದು. ಕಾಗದದ ಕೊರತೆ ವಿಪರೀತವಿದೆ. ಆದುದರಿಂದ ಇವೆಲ್ಲ ವೆಚ್ಚದ ಚಟಗಳನ್ನೆಲ್ಲ ಬಿಟ್ಟುಗೊಡತಕ್ಕದ್ದೆಂದು ನನ್ನ ಅಭಿಪ್ರಾಯ. ನಾಗರಿ ಮತ್ತು ಉರ್ದು ಲಿಪಿಯಲ್ಲಿ ಕೈಕಾಗದದ ಮೇಲೆ ಸಾದಾ ರೀತಿಯಲ್ಲಿ ಮುದ್ರಿಸಿದ ಹೆಸರು ದೆಸೆಯುಳ್ಳ ಕಾಗದಗಳನ್ನು ಪತ್ರವ್ಯವಹಾರಕ್ಕಾಗಿ ಉಪಯೋಗಿಸತಕ್ಕದ್ದು. ಈ ಮೊದಲು ಮುದ್ರಿಸಲ್ಪಟ್ಟ ಸೋನೇರಿ ಸ್ಟೇಶನರಿಯನ್ನು ಸುಲಭವಾಗಿ ಹರಿದು ಹೆಚ್ಚು ಉಪಯುಕ್ತ ಕೆಲಸಕ್ಕಾಗಿ ಉಪಯೋಗಿಸಬೇಕು. ಮಿತವ್ಯಯದ ನೆವದಿಂದ ಅವನ್ನೆಲ್ಲ ಹಾಳು ಮಾಡಿ ಬಿಡಬಾರದು. ಭಾರೀ ವೆಚ್ಚದ ಮತ್ತು ಬಹುಶಃ ಪರದೇಶೀ ಮಾಲೆಲ್ಲ ತೀರುವವರೆಗೆ ಹಳ್ಳಿಯ ಸರಕುಗಳನ್ನು ಹಾಗೆಯೆ ಇಡಬಾರದೆಂಬುದು ನಿಃಸಂದೇಹ. ಪ್ರಜಾ ಪ್ರತಿನಿಧಿ ಸರಕಾರಗಳು ಲೋಕಪ್ರಿಯ ಯೋಜನೆಗಳನ್ನು ಮತ್ತು ಕಡಮೆ ವೆಚ್ಚದ ರೂಢಿಗಳನ್ನನುಸರಿಸಿ ತಮ್ಮ ಆಡಳಿತದ ಡಂಗುರವನ್ನು ಸಾರಬೇಕು.

ಮಸೂರಿ — ಮೋ. ಕ. ಗಾಂಧಿ

೮–೬–೪೬

## ಉರುಳಿ ಕಾಂಚನ

ಬಹಳ ದೂರ ಸ್ಥಳಗಳಿಂದ ರೋಗಿಗಳು ಚಿಕಿತ್ಸೆಗಾಗಿ ಉರುಳಿ ಕಾಂಚನಕ್ಕೆ ಬರುತಿರುವರೆಂದು ನಮ್ಮ ಸಹಕಾರ್ಯಕರ್ತರು ಬರೆಯುತ್ತಾರೆ. ಕಾಯಂಯಾಗಿ ವಾಸಮಾಡಲಿಕ್ಕೆ ಮನೆಗಳು ಮತ್ತು ರೋಗಿಗಳಿಗೆ ಇರಲು ಕೋಣೆಗಳು ಇನ್ನೂ ಇರುವುದಿಲ್ಲೆಂದು ಈಗಾಗಲೆ ನಾನು ಹರಿಜನ ಸೇವಕದಲ್ಲಿ ಉಲ್ಲೇಖಿಸಿದ್ದೇನೆ. ಇದಕ್ಕಾಗಿ ಕೆಲಭೂಮಿ ಇದೀಗ ಸಿಕ್ಕಿದೆಂದು ನಾನು ಇದೀಗ ಕೇಳಿದ್ದೇನೆ. ಆದರೆ ಆ ಸ್ಥಳದಲ್ಲಿ ಗುಡಿಸಲುಗಳನ್ನು ಕಟ್ಟಿಸುವದು ಇನ್ನೂ ಆಗಬೇಕಾಗಿದೆ. ಹಳ್ಳಿಯಲ್ಲಿಯೂ ಮನೆಗಳು ಸಿಕ್ಕುವಂತಿಲ್ಲ; ಹೊರಗಿನಿಂದ ಬಂದ ರೋಗಿಗಳನ್ನು ಅಲ್ಲಿಗೆ ಕಳಿಸುವಂತಿಲ್ಲ ಏನೇ ಆದರೂ ಹಳ್ಳಿಯನ್ನು ನಗರವನ್ನಾಗಿ ಪರಿವರ್ತಿಸುವ ಇಚ್ಛೆ ಇಲ್ಲ. ಪ್ರತಿಯೊಂದು ಹಳ್ಳಿಯಲ್ಲಿ ಸಾಲೆ ಇರುವಂತೆ ನೈಸರ್ಗಿಕ ಉಪಚಾರಾಲಯವಿರಬೇಕೆಂಬುದೆ ನಿಜವಾದ ಉದ್ದೇಶವಾಗಿದೆ.

ಉರುಳಿ ಕಾಂಚನದಲ್ಲಿಯ ನನ್ನ ಸಹಕಾರ್ಯಕರ್ತರು ಪತ್ರವ್ಯವಹಾರದ ಮೂಲಕ ರೋಗಿಗಳಿಗೆ ಸಲಹೆ ಕೊಡಲು ಸಮರ್ಥರಾಗಿಲ್ಲೆಂಬುದನ್ನು ವಾಚಕರು ಮನಸ್ಸಿನಲ್ಲಿಟ್ಟುಕೊಳ್ಳತಕ್ಕದ್ದು. ಬಹಳ ದೂರಿನ ಸ್ಥಳದಲ್ಲಿರುವ ಜನರು ತಾವೇ ತಮ್ಮ ನೈಸರ್ಗಿಕೋಪಚಾರವನ್ನು ಪಡೆದುಕೊಳ್ಳಬಹುದಾಗಿದೆ. ತಮ್ಮ ಮನೆಯಲ್ಲಿ ರಾಮನಾಮವನ್ನು ಜಪಿಸುವದು ಯಾರಿಗೆ ತಾನೆ ಸಾಧ್ಯವಿಲ್ಲ? ಅದೇ ರೀತಿಯಾಗಿ ತಾವಿದ್ದಲ್ಲಿಯೆ 'ಟಬ್‌ಬಾಥ' ಮೊದಲಾದ್ದನ್ನು ಸಾಧಿಸುವುದು ಶಕ್ಯವಿದೆ.

ಮಸೂರಿ — ಮೋ. ಕ. ಗಾಂಧಿ

೨—೬—೪೬ — (ಹರಿಜನ ಸೇವಕದಿಂದ)

## ಇಷ್ಟೇ ಸಾಲದು

ಹರಿಜನರಿಗೆ ಸಾರ್ವಜನಿಕ ಬಾವಿಗಳಲ್ಲಿ ನೀರು ತುಂಬಿಗೊಡುವುದಿಲ್ಲ ಮತ್ತು ಅವರಿಗೆ ಇತರ ಸಾಮಾಜಿಕ ಸೌಕರ್ಯಗಳನ್ನೊದವಿಸಿಕೊಡುವುದಿಲ್ಲೆಂಬುದರ ಕಡೆಗೆ ಶ್ರೀ ಹೇಮಂತ ಕುಮಾರರು ಮಹಾತ್ಮರ ಲಕ್ಷ್ಯವನ್ನೆಳೆದಿದ್ದರಷ್ಟೆ. ಆ ತಪ್ಪನ್ನು ತಿದ್ದಿಕೊಳ್ಳಿರೆಂದು ಮಹಾತ್ಮರು ಗುಜರಾಥಿಗಳಿಗೆ ಬಿನ್ನವಿಸಿಕೊಂಡಂದಿನಿಂದ ಅನೇಕ ಸ್ಥಳಗಳಲ್ಲಿಯ ಸವರ್ಣ ಹಿಂದುಗಳ ಭಾವನೆಗಳು ಬಹಳ ಮಟ್ಟಿಗೆ ಕಲುಕಿವೆ. ಸಾಬರಮತಿ ಹರಿಜನ ಆಶ್ರಮದ ಶ್ರೀ ಪರೀಕ್ಷಿತಲಾಲರು ಗುಜರಾಥದಲ್ಲಿಯ ಕೆಲ ಹಳ್ಳಿಗಳ ತಮ್ಮ ಸಂಚಾರದಲ್ಲಿ ಬಂದ ಅನುಭವಗಳನ್ನು ಗಾಂಧೀಜಿಯವರಿಗೆ ಪತ್ರದ್ವಾರಾ ಈ ರೀತಿ ವರದಿ ಮಾಡಿದ್ದಾರೆ.

"ಸುರತ ಜಿಲ್ಹೆಯ ಕೆಲ ಹಳ್ಳಿಗಳನ್ನು ನಾನು ಸಂದರ್ಶಿಸಿದೆ. ಕೆಲಹಳ್ಳಿಗಳ ಬಾವಿಗಳನ್ನು ಹರಿಜನರಿಗೆ ಸಂತೋಷದಿಂದ ಮುಕ್ತದ್ವಾರ ಮಾಡಿದ್ದಾರೆ. ರಾಷ್ಟ್ರೀಯ ಸಪ್ತಾಹದಲ್ಲಿ ಎರಡು ಸ್ಥಳಗಳಲ್ಲಿ ಸಾರ್ವಜನಿಕ ಉತ್ಸವ ನಡೆದು ಹರಿಜನ ಕುಟುಂಬದವರಿಗೆ ಸಾರ್ವಜನಿಕ ಬಾವಿಗಳನ್ನು ಮುಕ್ತದ್ವಾರ ಮಾಡಲಾಯಿತು. ಎರಡೂ ಹಳ್ಳಿಗಳಲ್ಲಿ ಹರಿಜನರಲ್ಲಿ ಕೋಳೀ ಜಾತಿಯವರೆ ಹೆಚ್ಚಾಗಿದ್ದಾರೆ. "ಛಾಲಿಸಿ ತಾಲೂಕಿನ ಬೂದಿಯಾ ಹಳ್ಳಿಯಲ್ಲಿ ಸಣ್ಣ ಪ್ರಮಾಣದಲ್ಲಿ ಮಿಶ್ರಭೋಜನದ ಏರ್ಪಾಡನ್ನೂ ಹರಿಜನರು ಸಾರ್ವಜನಿಕ ಬಾವಿಗಳಲ್ಲಿ ನೀರು ತುಂಬಿದ ನಂತರ ಏರ್ಪಡಿಸಲಾಗಿತ್ತು. ಈ ಹಳ್ಳಿಯಲ್ಲಿ ಹರಿಜನರಿಗಾಗಿ ಪ್ರತ್ಯೇಕ ಬಾವಿಯಿದ್ದುದರಿಂದ ಅವರಿಗೆ ಹೊಸದಾಗಿ ಮುಕ್ತದ್ವಾರ ಮಾಡಿದ ಸಾರ್ವಜನಿಕ ಬಾವಿಗಳಿಗೆ ಹೋಗಲು ಅವರಿನ್ನೂ ಹಿಂದೆಮುಂದೆ ನೋಡುತಿರುವರು. ಆದರೆ ಅವರ ಬಗ್ಗೆ ಹಳ್ಳಿಗರಲ್ಲಿ ಬಹುಜನರು ಪೂರ್ಣ ಸಹಾನುಭೂತಿಯನ್ನು ತಾಳುತಿರುವರಾದುದರಿಂದಲೆ ಅವರು ಸಮಾಧಾನ ಹೊಂದಿರುವರೆಂಬದಾಗಿ ನನಗೆ ತಿಳಿದು ಬಂದಿದೆ. ಸಾರ್ವಜನಿಕ ಸಭೆಯೊಂದನ್ನು ಆ ಹಳ್ಳಿಯಲ್ಲಿ ಕೂಡಿಸಲಾಗಿತ್ತು; ಕೋಳೀ ಸ್ತ್ರೀಯರನ್ನು ಆ ಸಭೆಯಲ್ಲಿ ಸ್ವಾಗತಿಸಲಾಯಿತು.

"ಇದೇ ತಾಲೂಕಿನ ಹಿಜಿರ ಹಳ್ಳಿಯನ್ನು ನಾನು ಸಂದರ್ಶಿಸಿದೆ. ಸುರತ ಜಿಲ್ಹೆಯಲ್ಲಿ ಸಮುದ್ರ ದಂಡೆಯಲ್ಲಿರುವ ಒಳ್ಳೆ ಆರೋಗ್ಯಧಾಮವಿದು. ೧೯೩೦ ನೇ ಚಳವಳಿಯ ನಂತರ ಅಲ್ಲಿಯ ತರುಣರು ಬಾಲಮಂದಿರವೊಂದನ್ನು ಯಶಸ್ವಿಯಾಗಿ ನಡೆಸಿಕೊಂಡು ಬಂದಿರುವರು. ಚರಕ ಸಂಘದವರು ನೇಯ್ಗೆ ಶಾಲೆಯನ್ನು ನಡೆಸುತಿರುವರು. ಅಲ್ಲದೆ ಪ್ರೌಢರಿಗಾಗಿ ಶಿಕ್ಷಣ ವರ್ಗಗಳೂ ಇವೆ. ಈ ಹಳ್ಳಿಯಲ್ಲಿ ಹರಿಜನ ಕುಟುಂಬ ಒಂದೇ ಇದೆ. ಆ ಕುಟುಂಬದಲ್ಲಿಯ ಹರಿಜನ ಕಸಗುಡಿಸುವವಳ ಹಣೆಗೆ ಸೌಭಾಗ್ಯದ ಕುಂಕುಮ ತಿಲಕವನ್ನು ಹಚ್ಚಿ ನೀರು ತರುವದಕ್ಕಾಗಿ ಸಾರ್ವಜನಿಕ ಭಾವಿಗೆ ಅವಳನ್ನು ಕರೆದುಕೊಂಡು ಹೋಗಲಾಯಿತು. ಆ ದರಿದ್ರಳ ಹತ್ತಿರ ನೀರು ಜಗ್ಗಲು ಹಗ್ಗ ಕೂಡ ಇಲ್ಲದರಿಂದ ಹಳ್ಳಿಯಲ್ಲಿಯ ಸವರ್ಣ ಹೆಣ್ಣುಮಗಳೊಬ್ಬಳು ತನ್ನ ಹಗ್ಗವನ್ನು ಕೊಟ್ಟಳು. ಈಗ ಅವಳು ಯಾರ ಆತಂಕವೂ ಇಲ್ಲದೆ ಸಾರ್ವಜನಿಕ ಹಳ್ಳಿ ಬಾವಿಯಿಂದ ನೀರು ತರುತಿರುವಳೆಂದು ನನಗೆ ತಿಳಿದು ಬಂದಿದೆ.

"ಖೇಡಾ ಜಿಲ್ಹೆಯ ವಡಾಡಲಾ ಹಳ್ಳಿಯಲ್ಲಿಯೂ ರಾಷ್ಟ್ರೀಯ ಸಪ್ತಾಹದಲ್ಲಿ ತರುಣರು ಹರಿಜನರಿಗೆ ಈ ಹಕ್ಕನ್ನು ಒದಗಿಸಿ ಕೊಡುವದಕ್ಕಾಗಿ ಒಂದು ಕಾರ್ಯಕ್ರಮವನ್ನು ಏರ್ಪಡಿಸಿದ್ದರು. ಮತ್ತು ಅದಕ್ಕಾಗಿ ಜಿಲ್ಹೆಯ ಕಾರ್ಯಕರ್ತರನ್ನು ಆಮಂತ್ರಿಸಿದ್ದರು. ಆದರೆ ಆ ಸುಧಾರಣೆಗಾಗಿ ಸನಾತನಿವರ್ಗದವರು ಪೂರ್ಣವಾಗಿ ತಯಾರಿದ್ದಿಲ್ಲೆಂಬುದು ಕಂಡು ಬಂದಿತು. ಎಲ್ಲಿಯ ವರೆಗೆ ಹರಿಜನರಿಗೆ ಸಾರ್ವಜನಿಕ ಬಾವಿಗಳಲ್ಲಿ ಪ್ರವೇಶ ಸಿಕ್ಕುವದಿಲ್ಲವೊ ಅಲ್ಲಿಯ ವರೆಗೆ ತಾನು (ಅವನು ಪಾತೀದಾರ ಕುಟುಂಬದವ) ಕೇವಲ ಹರಿಜನರ ಬಾವಿಯಿಂದಲೆ ನೀರು ತರುವದಾಗಿ ಆ ಯುವಕರ ಧುರೀಣನು ಸಾರಿದನು. ಅವನ ಹೆಂಡತಿಯೂ ಅವನೀ ನಿರ್ಧಾರಕ್ಕೆ ಹೂಗೊಟ್ಟಳು. ಹಳ್ಳಿಯಲ್ಲಿಯ ಇನ್ನೂ ಅನೇಕ ತರುಣರು ತಾವೂ ಅದೇ ನಿಶ್ಚಯ ಕೈಕೊಂಡರು. ಈ ಸಂಬಂಧದಲ್ಲಿ ಕೂಡಿದ ಸಾರ್ವಜನಿಕ ಸಭೆಯಲ್ಲಿ ಹರಿಜನ ಬಾವಿಯಿಂದ ತಂದ ನೀರನ್ನು ಎಲ್ಲರಿಗೂ ಕೊಡಲಾಯಿತು. ಇದರಿಂದ ಸನಾತನಿಗಳ ವಿರೋಧ ಕಡಮೆಯಾಯಿತು. ಹರಿಜನರಿಗೆ ಸಾರ್ವಜನಿಕ ಬಾವಿ ಮುಕ್ತದ್ವಾರವಾಯಿತು. ಆದರೆ ಹರಿಜನರು ಈ ವರೆಗೆ ಈ ಸೌಕರ್ಯದ ಲಾಭ ಪಡೆಯಲು ಇನ್ನೂ ಧೈರ್ಯ ಮಾಡಿರುವದಿಲ್ಲ."

ಇದೆಲ್ಲ ಒಳ್ಳೆಯದೆ. ಆದರೆ ಗುಜರಾಥವು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುರೀಣತ್ವ ವಹಿಸ ಬಯಸುತ್ತಿದ್ದರೆ ಇಷ್ಟೇ ಸಾಲದು. ಹರಿಜನರ ಕೊರತೆಗಳನ್ನೆಲ್ಲ ಇಂತಿಷ್ಟು ಅವಧಿಯಲ್ಲಿ ಸಂಪೂರ್ಣವಾಗಿ ಹೋಗಲಾಡಿಸುವ ನಿರ್ಧಾರದಿಂದ ಜೋರಾದ ಚಳವಳಿಯನ್ನು ನಡೆಸಬೇಕು. ಅನಿಯಮಿತ ಅವಧಿಯ ವರೆಗೆ ಹರಿಜನೋದ್ಧಾರ ಕಾರ್ಯವನ್ನು ಮುಂದಕ್ಕೆ ಹಾಕಲಾಗದು. ಸ್ವಾತಂತ್ರ್ಯದಂತೆಯೆ ಅದನ್ನು ಈಗಳೆ ಕಾರ್ಯಕಾರಿ ಮಾಡಬೇಕಾಗಿದೆ. ಅತ್ಯಂತ ಉಪಯುಕ್ತ ಜನಾಂಗಕ್ಕೆ ಮೂಲಭೂತ ಹಕ್ಕುಗಳನ್ನು ಕೊಡದಿದ್ದರೆ ಸ್ವಾತಂತ್ರ್ಯದ ಗುಳಿಗೆಯೂ ನಮ್ಮ ಬಾಯಿಯಲ್ಲಿ ಕಹಿಯಾಗಿ ಪರಿಣಮಿಸುವದು.

ಮುಸೂರಿ ಪ್ಯಾರೇಲಾಲ
೭-೬-೪೬

## ಮುಸೂರಿ ಪ್ರವಾಸದಲ್ಲಿ

ಮುಸೂರಿಯ ಪ್ರಾರ್ಥನಾ ಸಭೆಯಲ್ಲಿ ಈ ಸ್ಥಳದಲ್ಲಿಯ ಶ್ರೀಮಂತ ಜನರು ತಮ್ಮಲ್ಲಿರುವ ಬಡವರ ಸಂಬಂಧದಲ್ಲಿ ವಿಚಾರ ಮಾಡಬೇಕೆಂದು ಸೂಚಿಸಿದೆನಲ್ಲದೆ ಅವರ ಜೀವನವನ್ನು ಸುಖದಾಯಕ ಮಾಡಿರೆಂದೂ ಕೇಳಿಕೊಂಡೆನು. ಪರ್ವತದ ಹವೆಯ ಲಾಭ ಎಲ್ಲರಿಗೂ ಸಿಕ್ಕುವಂತೆ ನಿವಾಸ ಸ್ಥಳಗಳನ್ನು ಕಲ್ಪಿಸಿಕೊಡುವಂತೆ ಮತ್ತು ಅವನ್ನು ಸ್ವಚ್ಛ ಹಾಗು ನಿರೋಗಿಯಾಗುಳಿಯುವಂತೆ ನೋಡಿಕೊಳ್ಳಿರೆಂದೂ ಸೂಚಿಸಿದೆನು. ಇವೆರಡೂ ಸೂಚನೆಗಳನ್ನು ಒಳ್ಳೆ ಉತ್ಸಾಹದಿಂದ ಸ್ವೀಕರಿಸಲಾಗಿದೆ. ಧರ್ಮಶಾಲೆಯೊಂದನ್ನು ಕಟ್ಟಿಸುವುದಕ್ಕಾಗಿ ವರ್ಚಸ್ವೀ ಜನರ ಒಂದು ಸಮಿತಿಯನ್ನು ಸ್ಥಾಪಿಸಿದ್ದಾಗಿದೆ. ಯೋಗ್ಯ ರೀತಿಯಿಂದ ಈ ಅತಿಥಿಗೃಹವನ್ನು ನೋಡಿಕೊಂಡು ಹೋಗುವುದಕ್ಕಾಗಿ ಕಾರ್ಯಕರ್ತರು ಇಲ್ಲವೆ ಒಬ್ಬ ಕಾರ್ಯಕರ್ತನಾದರೂ ಇರುವದು ಅತ್ಯಂತ ಮಹತ್ವದ ಸಂಗತಿಯಾಗಿದೆಂಬುದನ್ನು ಸೂಚಿಸುವುದಕ್ಕಾಗಿಯೇ ನಾನೀ ಟಿಪ್ಪಣಿಯನ್ನು ಬರೆಯುತ್ತೇನೆ. ಬಾಡಿಗೆಯಿಲ್ಲೆಂದು ಗೊತ್ತಾದ ಕೂಡಲೆ ಅಲ್ಲಿ ವಾಸಿಸಬಹುದಾದ ಅತಿಥಿಗಳನ್ನಾರಿಸುವದು ಸಣ್ಣ ಕಾರ್ಯವಲ್ಲ. ಯೋಗ್ಯ ಬಾಡಿಗೆ ಕೊಡುವ ತ್ರಾಣವಿದ್ದವರಿಗೆ ಅಲ್ಲಿ ಸ್ಥಳ ಸಿಕ್ಕದಂತೆ ಎಚ್ಚರಪಡಬೇಕಾದುದು ಅವಶ್ಯವಾಗಿದೆ. ಕೊಡಲಿಕ್ಕೆ ಸ್ವಲ್ಪವೂ ಹಣವಿಲ್ಲದಂಥವರಿಗೇ ಅಲ್ಲಿ ಪ್ರವೇಶ ದೊರೆಯಬೇಕು. ಆ ಸ್ಥಳವನ್ನು ಬಹಳ ಸ್ವಚ್ಛವಿಡಬೇಕಾಗಿದ್ದರೆ, ಪ್ರಯಾಣಿಕರ ಹಿತದ ದೃಷ್ಟಿಯಿಂದಲೆ ಕೆಲವೊಂದು ನಿಯಮಗಳನ್ನು ಮಾಡುವದು ಅವಶ್ಯವಾಗಿದೆಯಲ್ಲದೆ ಅವುಗಳನ್ನು ಒಳ್ಳೆ ದಕ್ಷತೆಯಿಂದ ಜಾರಿಯಲ್ಲಿ ತರಬೇಕು. ಹೀಗಿದ್ದರೂ ಅವರನ್ನು ಅತ್ಯಂತ ನಮ್ರತೆಯಿಂದ ನಡೆಸಿಕೊಳ್ಳಬೇಕು. ಬಡತನವೊಂದು ಅಪರಾಧವೆಂಬ ಭಾವಿನೆ ಅವರಲ್ಲೆಂದೂ ಉಂಟಾಗದಂತೆ ದಕ್ಷತೆ ವಹಿಸಬೇಕು. ಬಡವರನ್ನು ರೇಲ್ವೆ ಡಬ್ಬಿಗಳಲ್ಲಿ ಮತ್ತು ರೇಲ್ವೆ ಸ್ಟೇಶನಗಳಲ್ಲಿ ಕೆಟ್ಟ ರೀತಿಯಿಂದ ನಡೆಸಿಕೊಳ್ಳಲಾಗುತಿದೆಂಬುದು ಮೂರನೇ ವರ್ಗದ ಪ್ರಯಾಣಿಕರಿಗೆ ಅನುಭವದ ಸಂಗತಿಯಾಗಿದೆ. ಈ ಬಡ ದೇಶದಲ್ಲಿ ಬಡತನಕ್ಕೆ ಒಂದು ಬಗೆಯ ಸ್ಥಾನಮಾನವಿದೆಂದು ಪುಸ್ತಕಗಳು ಸಾರುತ್ತಿದ್ದರೂ ಸಾರ್ವಜನಿಕ ಸ್ಥಳಗಳಲ್ಲಿ ಬಡವರನ್ನು ಹೇಯಭಾವನೆಯಿಂದ ನೋಡಿಕೊಳ್ಳುತಿರುವುದು ಮತ್ತು ಅದಕ್ಕಾಗಿ ಅವರು ಕೊರಗಬೇಕಾದುದು ನಿಜವಾಗಿಯೂ ವಿಷಾದದ ಸಂಗತಿಯಾಗಿದೆ. ಈ ಬಗೆಯ ದುರದೃಷ್ಟ ವಾತಾವರಣದಲ್ಲಿ ಈ ಅತಿಥಿಗೃಹವನ್ನು ಕಟ್ಟಬೇಕಾಗಿದೆ. ಈ ಸನ್ಮಾನ್ಯ ಸ್ಥಳದ ಬೇಕುಬೇಡಿಕೆಗಳನ್ನೆಲ್ಲ ತಿಳಿದುಕೊಂಡು ಕಾರ್ಯಮಾಡುವಂಥ ಮಾದರಿಯ ಕಾರ್ಯಕರ್ತರನ್ನು ಸಮಿತಿಯವರು ಈಗಿನಿಂದಲೇ ಹುಡುಕಬೇಕಾಗಿದೆ. ಅಂಥ ಕಾರ್ಯಕರ್ತ ದೊರೆತದ್ದಾದರೆ ಇಂಥ ಪರ್ವತ ವಾಸಸ್ಥಳಗಳಿಗೆ ಮಾದರಿಯಾಗುವಂಥ ಯೋಜನೆ ಇಲ್ಲಿ ಸಾಧ್ಯವಾಗಬಲ್ಲದು.

ಮುಸೂರಿ ಮೋ. ಕ. ಗಾಂಧಿ
೮—೬—೧೯೪೬

## ಆದರ್ಶ ಮಹಿಳೆ

ಕಂಡಿಹಿರಾ ನೀವು । ಸುಂದರ
ಸಾಧ್ವೀರತ್ನವನು ॥
ನಲ್ಲನ ನಂಬಿಕೆಗೆ । ಇವಳ
ಲ್ಲಾಗದು ಹಾನಿಯದು ॥
ಜೀವನಪರಿಯಂತ । ನಲ್ಲನ
ಹಿತವನೆ ಚಿಂತಿಸುತ ॥
ಕೇಡನು ತಾನೊಂದೂ । ಬಯಸಳು
ನಲ್ಲನಿಗೆಂದೆಂದೂ ॥
ಉಣ್ಣೆಯ ನೂಲನ್ನು । ಕೊಂಡು
ಬಟ್ಟೆಯ ನೆಯ್ಯುವಳು ॥
ವರ್ತಕ ನಾವೆಯೊ ತಾ । ದೂರದಿ
ಅನ್ನವ ತರುತಿಹಳು ॥
ಬೆಳಗಿನ ಜಾವದಲಿ । ಇನ್ನೂ
ಇರುಳಿರುತಿರುವಾಗ ॥
ಬೇಗನೆ ತಾನೆದ್ದು । ಆಳುಗ
ಳಾರೈಕೆಯ ನೋಡಿ ॥
ದುಡಿಮೆಯವರಿಗಿತ್ತು । ಅಕ್ಕರೆ
ಮಕ್ಕಳಿಗುಣಿಸುವಳು ॥
ಭೂಮಿಯ ತಾನಾಯ್ದು । ಪಡೆದು
ದ್ರಾಕ್ಷ ಬಳ್ಳಿ ನೆಟ್ಟು ॥
ಫಲವ ಪಡೆಯಲೆಂದು । ತಾನೆ
ದುಡಿವಳು ಮೈಮುರಿದು ॥
ಭಾರಭಾರವಾಗಿ । ತೂಗುವ
ಗೊಂಚಲಗಳ ಕಂಡು ॥
ದುಡಿಮೆಯ ಲಾಭಕ್ಕೆ । ಮನದಲಿ
ಹಿರಿ ಹಿರಿ ಹಿಗ್ಗುವಳು ॥
ದೀಪದ ಬೆಳಕಿನಲಿ । ಇರುಳಲಿ
ನೂಲನು ನೂಲುವಳು ॥
ದೀನರು ಬಡವರಿಗೆ । ನೆರಳನು
ನೀಡೇ ನೀಡುವಳು ॥
ಮನ ಮಕ್ಕಳಿಗೆಲ್ಲ । ಶಿಶಿರದ
ಬಾಧೆಯಾಗದಂತೆ ॥
ಉಣ್ಣೆಯ ಬಟ್ಟೆಯನು । ಒದಗಿಸಿ
ದಕ್ಷತೆ ತೋರಿಹಳು ॥
ರೇಶಿಮೆ ಯುಡೆಯುಟ್ಟಾ । ಮಾನಿನಿ
ರೇಶಿಮೆ ಜವಳಿಯನು ॥
ವ್ಯಾಪಾರವ ಮಾಡಿ । ಮನೆತನ
ದೇಳಿಗೆ ಸಾಧಿಪಳು ॥
ಊರಿನ ಹಿರಿಯರಲಿ । ಈಕೆಯ
ನಲ್ಲನು ತಾನೊಬ್ಬ ॥
ವೀರೆ ಧೀರೆಯಿವಳು । ಕಾಲನ
ನೇಡಿಸಿ ನಗುತಿಹಳು ॥
ಜಾಣೆ ಬಾಯಿ ತೆರೆಯೆ । ಸುರಿವುದು
ದಯೆಯ ಜೇನು ನುಡಿಯೆ ॥
ಮನೆವಾರ್ತೆಯ ದಕ್ಷೆ । ಅಲಸದ
ಕೂಳು ತಿನ್ನಳೆಂದೆ ॥
ಮಕ್ಕಳು ತಾಯಿಯನು । ಕರೆವರು
ಪುಣ್ಯವಂತೆಯೆಂದು ॥
ಅಪೂರ್ವ ಸತಿಯೆಂದು । ನಲ್ಲನ
ನಲ್ಮೆಯ ಪಡೆದಿಹಳು ॥
ದೇವಭೀರು ಸತಿಗೆ । ಹೊಗಳಿಕೆ
ತಾನ್ಹೆಸಲ್ಲದೇನು ?
ಜನರ ನಲ್ಲನುಡಿಗೆ । ಇವಳು
ಯೋಗ್ಯಳಲ್ಲವೇನು ?

ಈ ಮೇಲಿನ ಚಿತ್ರವು ಶತಮಾನಗಳ ಹಿಂದಿನದು. ಹೀಬ್ರುದಲ್ಲಿಯ "ಸಾಲೊಮನನ ಜಾಣತನ"ದಿಂದ ಆಯ್ದುಕೊಂಡದ್ದಾಗಿದೆ. ಭಾರತದ ಕೆಲವು ಸಾಧುಗಳೂ ಈ ರೀತಿ ವರ್ಣನೆ ಮಾಡಿದ್ದಾರೆ. ಅಂದಿನ ದಿನದಲ್ಲಿ ಮಹಿಳೆಯರು ಪುರುಷರೊಂದಿಗೆ ಸರಿಸಮಾನತೆಯಿಂದ ದುಡಿದು ನೈಪುಣ್ಯವನ್ನೂ ದಕ್ಷತೆಯನ್ನೂ ಮೆರೆದು ಜೀವನದಲ್ಲಿ ರುಚಿಯನ್ನು ಕಂಡುಕೊಂಡಿರಬೇಕು ಎಂದು ಇದರಿಂದ ವ್ಯಕ್ತವಾಗುತ್ತದೆ. ಈ ಉಪದೇಶವು ಬಡವರಿಗಿಂತ ಬಲ್ಲಿದವರನ್ನೇ ಉದ್ದೇಶಿಸಿ ಹೇಳಿದಂತಿದೆ ಏನೇ ಇರಲಿ, ಆಧುನಿಕ ಮಹಿಳೆಯು ತನ್ನೆದುರಿಗಿಟ್ಟುಕೊಳ್ಳಬಹುದಾದ ಆದರ್ಶವಿದರಲ್ಲಿದೆ. ಈ ಚಿತ್ರದಲ್ಲಿ ನಿರೂಪಿಸಲಾದ ಮಹಿಳೆಯ ಚಟುವಟಿಕೆಗಳು, ಮನೆಯನ್ನಷ್ಟೇ ಅಲ್ಲ ಸಮಾಜವನ್ನೇ ನಿರ್ಮಿಸುವಲ್ಲಿ ಅವಳ ಸ್ಥಾನ, ಇವೆಲ್ಲ ಪೌರ್ವಾತ್ಯ ಮಹಿಳೆಯರಲ್ಲಿ ಇಲ್ಲದಂತಾಗಿದೆ. ಈಗ ಮಹಿಳೆಯು ಕೇವಲ ಮನೆಗೆಲಸಕ್ಕೆಂದೇ ಇರುವಳಲ್ಲದೆ ಅಬಲೆಯೂ ಪರಾವಲಂಬಿನಿಯೂ ಆಗಿದ್ದಾಳೆ. ಹರಿದುಹೋದ ತನ್ನ ಬಾಳಬಟ್ಟೆಯನ್ನು ಸರಿಪಡಿಸಿಕೊಳ್ಳುವದಕ್ಕಾಗಿ ಅವಳು ಪುನಃ ಚರಕವನ್ನೇ ಆಶ್ರಯಿಸುವ ಕಾಲವೀಗ ಬಂದಿದೆ. ಇಲ್ಲಿ ಬಣ್ಣಿಸಿದಷ್ಟು ಮಹಿಳೆಯು ಉನ್ನತಳಾಗಬಲ್ಲಳಾದರೆ ತನ್ನ ನಾಡಿನ ಅದೇಕೆ ಇಡೀ ಜಗತ್ತಿನ ಪುನರುಜ್ಜೀವನಕ್ಕೆ ಬಹುವಾಗಿ ನೆರವಾಗಬಲ್ಲಳು. ಯಾವದೊಂದು ನಿಜವಾದ ಚೌಕಟ್ಟಿಗೆ ಹೊಂದಿಕೊಳ್ಳುವಂತೆ ಮೊದಲು ತನ್ನನ್ನು ತಿದ್ದಿಕೊಳ್ಳುವ ಪ್ರಯತ್ನ ಮಾಡದೆ ಹೊಸ ಜಗತ್ತಿನ ಯೋಜನೆ ನಡೆಸುವದು ಅಷ್ಟೊಂದು ಪ್ರಯೋಜನಕಾರಿಯಲ್ಲ.

ಮುಸೂರಿ ಅ. ಕು.
೨೯-೫-೪೬

## ಭುಸಾವಳ ತಾಲೂಕಿನಲ್ಲಿ ಹರಿಜನ ಕಾರ್ಯ

ಶ್ರೀ ಥಕ್ಕರಬಾಪ್ಪಾರವರು ಹೀಗೆ ಬರೆಯುತ್ತಾರೆ.....

"ಭುಸಾವಳ ತಾಲೂಕಿನಲ್ಲಿ ಹರಿಜನ ಕಾರ್ಯವನ್ನು ಗಟ್ಟಿ ತಳಹದಿಯ ಮೇಲೆ ಮತ್ತು ವ್ಯಾಪಕ ರೀತಿಯಿಂದ ಮಾಡಬೇಕೆಂದು ನಿರ್ಧರಿಸಲಾಗಿದೆ. ಆದಕ್ಕಾಗಿ ಮೇ ೧೪-೧೫ ಕ್ಕೆ ಎರಡು ಸಭೆಗಳನ್ನು ಕೂಡಿಸಲಾಗಿತ್ತು. ಶ್ರೀ ವೈಕುಂಠಲಾಲ ಮೆಹತಾ, ಶ್ರೀ ಗಣಪತರಾವ ತಪಾಸೆ, ಶ್ರೀ ಸರ್ವೆ, ಶ್ರೀ ದಾಸ್ತಾನೆ ಮತ್ತು ನಾನು ಸಭೆಯಲ್ಲಿ ಉಪಸ್ಥಿತರಾಗಿದ್ದೆವು. ಎಲ್ಲ ಸಾರ್ವಜನಿಕ ಬಾವಿಗಳನ್ನು ಹರಿಜನರಿಗೆ ಮುಕ್ತದ್ವಾರ ಮಾಡಬೇಕೆಂಬ ಗುರಿಯನ್ನು ನಾವಿಟ್ಟುಕೊಂಡಿದ್ದೇವೆ. ಹಳ್ಳಿಗರು ಬಹಳ ಉತ್ಸಾಹ ತೋರಿಸಿದರು. ಯಶಸ್ಸು ಸಿಕ್ಕುವುದಾಗಿ ನಾವು ಆಶಿಸುತ್ತೇವೆ. ಪರಿಸ್ಥಿತಿ ಅನುಕೂಲವಾಗಿದೆ." ಬಾಪ್ಪಾರವರು ಬರೆದುದು ನಿಜವಿರುತ್ತದೆ. ಕಾಂಗ್ರೆಸ್ ಮಂತ್ರಿಮಂಡಳ ಅಧಿಕಾರದಲ್ಲಿದ್ದುದೆ ಅನುಕೂಲ ವಾತಾವರಣವೆಂದು ಥಕ್ಕರಬಾಪ್ಪಾರವರು ಬಹುಶಃ ಅರ್ಥ ಮಾಡಿಕೊಂಡಿರಬಹುದು. ಇನ್ನು ಮುಂದೆ ಜನತೆಯ ಮೇಲೆ ಸುಧಾರಣೆಗಳನ್ನು ಒತ್ತಾಯದಿಂದ ಹೇರಲಾಗುವದೆಂದು ಇದರರ್ಥವಲ್ಲ. ಜನತೆಯ ನಾಡಿ-ನಾಡಿಗಳಲ್ಲಿ ಭೇದಿಸಿದ ಅಸ್ಪೃಶ್ಯತೆಯಂಥ ದೋಷವನ್ನು ಅದೂ ಧರ್ಮದ ಹೆಸರಿನಲ್ಲಿ ಒತ್ತಾಯದಿಂದ ಕಿತ್ತಿಹಾಕುವದಶಕ್ಯವಿಲ್ಲ. ಆದರೆ ಪರಕೀಯ ಸರಕಾರವು ಹತ್ತಿಕ್ಕಲ್ಪಟ್ಟವರನ್ನು ಒತ್ತಾಯದಿಂದ ಮತ್ತಷ್ಟು ಹತ್ತಿಕ್ಕಲು ತನ್ನ ವರ್ಚಸ್ಸನ್ನೆಲ್ಲ ಉಪಯೋಗಿಸುತ್ತದೆ. ಕೇವಲ ಉದ್ದೇಶದಿಂದ ಅಥವಾ ಸ್ವಾರ್ಥ ಭಾವನೆಯಿಂದ ಅವರಿಗೆ ಸಹಾಯ ಮಾಡಲು ಪ್ರಯತ್ನಿಸುವಾಗ ಕೂಡ ಬಲುಮೆಯನ್ನೆ ಉಪಯೋಗಿಸಲಾಗುತ್ತದೆ. ಕಾಂಗ್ರೆಸ್ಸು ಬಲುಮೆಯಿಂದ ತನ್ನ ಸ್ಥಾನಮಾನಗಳನ್ನು ಗಳಿಸಿಲ್ಲ. ಅದು ಅತ್ಯಂತ ವಿಶುದ್ಧವಾದ ಪ್ರಜಾಪ್ರಭುತ್ವ ಸಂಸ್ಥೆ. ಆದುದರಿಂದ ಮಂತ್ರಿಗಳು ಸಾರ್ವಜನಿಕರಿಗೆ ಆ ರೀತಿ ಶಿಕ್ಷಣ ಕೊಟ್ಟು ಅವರ ಅಭಿಪ್ರಾಯವನ್ನು ಸರಿಪಡಿಸಿ ಪ್ರಗತಿಪರ ಸುಧಾರಣೆಗಳಿಗೆಲ್ಲ ಜನತೆಯ ಬೆಂಬಲ ಪಡೆಯಬೇಕು. ತಮ್ಮ ಪ್ರಾಂತದಲ್ಲಿ ಹರಿಜನ ಕಾರ್ಯದಂಥ ಸುಧಾರಣೆಗಳಲ್ಲಿ ಇದರಿಂದ ಪ್ರೋತ್ಸಾಹನೆ ದೊರೆತಂತಾಗುವದು. ಮತ್ತು ಈ ಸುಧಾರಣೆಗಳ ವಿರುದ್ಧವಿದ್ದ ಶಕ್ತಿಗಳೆಲ್ಲ ತಂತಾವೆ ಮಾಯವಾಗುವುವು. ಭುಸಾವಳ ತಾಲೂಕಿನಂಥ ಮರ್ಯಾದಿತ ಕ್ಷೇತ್ರದಲ್ಲಿ ಒಳ್ಳೇ ಜೋರಿನಿಂದ ಕಾರ್ಯಮಾಡುವುದರಿಂದ ಅದು ಒಳ್ಳೆ ಫಲಪ್ರದವಾಗಿ ಪರಿಣಮಿಸುವ ಸಂಭವವುಂಟು. ಇಡೀ ಹಿಂದುಸ್ತಾನವನ್ನು ಒಮ್ಮೆಲೇ ನಾವು ಮುಟ್ಟಲಾರೆವು. ಆವಶ್ಯಕ ಸಾಮರ್ಥ್ಯ ಮತ್ತು ವರ್ಚಸ್ಸು ಕಾರ್ಯಕರ್ತರಲ್ಲಿ ಇದ್ದ ಸ್ಥಳಗಳಲ್ಲೆಲ್ಲ ಕಾರ್ಯವು ಹೆಚ್ಚು ವೇಗದಿಂದ ನಡೆಯುವುದು. ಮರ್ಯಾದಿತ ಕ್ಷೇತ್ರದಲ್ಲಿ ಕಾರ್ಯ ಪ್ರಾರಂಭಿಸುವುದನ್ನು ಎರಡನೆಯವರೂ ಕಲಿಯತಕ್ಕದ್ದಾಗಿದೆ. ಮತ್ತು ಆದರಿಂದ ಬೇಗನೆ ಯಶಸ್ಸನ್ನು ಪಡೆಯಬಹುದಾಗಿದೆ. ಭುಸಾವಳದಲ್ಲಿ ಪ್ರಾರಂಭಿಸಲ್ಪಟ್ಟ ಕಾರ್ಯವು ಅಂತು ಯಶಸ್ವಿಯಾಗಲೆಂದು ಆಶಿಸುವಾ

ಮುಸೂರಿ ಮೋ. ಕ. ಗಾಂಧಿ
೨೯—೫—೪೬

(ಹರಿಜನ ಬಂಧುವಿನಿಂದ)

# ಕ ರ್ನಾ ಟ ಕ

## ಧಾರವಾಡ

ಅಖಿಲ ಕರ್ನಾಟಕ ಕುಂಬಾರ ಕಲಾವರ್ಧಕ ಪರಿಷತ್ತು ೧೦ ನೇ ತಾರೀಕು ಧಾರವಾಡದಲ್ಲಿ ಲಿಂಗಾಯತ ನಗರ ಭವನದಲ್ಲಿ ಶ್ರೀ ಷಣ್ಮುಖಪ್ಪಾ ಅಂಗಡಿ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಯಲ್ಲನಗೌಡ ಕಟ್ಟೀಮನಿ ವಿಜಾಪುರ ಇವರು ಸ್ವಾಗತಾಧ್ಯಕ್ಷರಾಗಿದ್ದರು. ಶ್ರೀ ಶಿವಲಿಂಗಪ್ಪನವರು ಕಂಠಿ ಇವರು ಪರಿಷತ್ತನ್ನು ಪ್ರಾರಂಭಿಸಿದರು. ಸಂಘದ ಸಹಾಯಕ್ಕೆಂದು ಪರಿಷತ್ತಿನಲ್ಲಿಯೆ ೨೬೦೦ ರೂಪಾಯಿ ಕೂಡಿದವು.

ಧಾರವಾಡ ಮನೋಹರ ಗ್ರಂಥ ಮಾಲೆಯ ಶತಗ್ರಂಥೋತ್ಸವದ ನಿಮಿತ್ತ ಏರ್ಪಡಿಸಿದ ಸಾಹಿತ್ಯ ಸ್ಪರ್ಧೆಗೆ ಲೇಖನಗಳನ್ನು ಕಳಿಸುವ ತಾರೀಖು ೩೦—೬—೪೬ ರ ವರೆಗೆ ಬೆಳಿಸಲಾಗಿದೆ.

ನವಲಗುಂದ ತಾಲೂಕಿನ ಅರೆಹಟ್ಟಿ ಕಡದಳ್ಳಿಗಳಲ್ಲಿ ಮೃಗಮಳೆ ಜೋರಿನಿಂದ ಹೊಡೆದು ಒಡ್ಡು ಒಡೆದು ಬಹಳ ಹಾನಿಯಾಗಿದೆ.

ಗದಗಿನಲ್ಲಿಯ ೨-೩ ನೇ ವಾರ್ಡಿನಲ್ಲಿಯ ಕಂಜೂಮರ್ಸ ಸೊಸಾಯಿಟಿಯ ಅಧಿಕೃತ ಬಟ್ಟೆಯ ಅಂಗಡಿಯವರೂ ಕಾಟನ್ ಸೇಲ ಸೊಸಾಯಿಟಿಯ ಅಧಿಕೃತ ಬಟ್ಟೆಯ ಅಂಗಡಿಯವರೂ ಕಳ್ಳಪೇಟೆಯಲ್ಲಿ ಬಟ್ಟೆ ಮಾರುತ್ತಾರೆಂಬ ಆರೋಪದಿಂದ ಸರಕಾರದವರು ಅವುಗಳಿಗೆ ಬೀಗಮುದ್ರೆಯೊತ್ತಿದ್ದಾರೆಂದು ತಿಳಿಯುತ್ತದೆ.

ರೋಣದಲ್ಲಿಯ ೯೦೦೦ ಜನರು ಸುತ್ತಲಿರುವ ೪ ಹಳ್ಳಿಯ ೩೦೦೦ ಜನರು ಅಲ್ಲಿರುವ ಒಂದೇ ಧಾನ್ಯದಂಗಡಿಯಿಂದ ಸೀದಾ ಪಡೆಯಬೇಕಾಗುತ್ತದೆ. ಇದರಿಂದ ಬಹಳ ತೊಂದರೆಯಾಗಹತ್ತಿದೆ. ಇಲ್ಲಿ ಕನಿಷ್ಠ ನಾಲ್ಕು ಅಂಗಡಿಗಳನ್ನಾದರೂ ತೆರೆಯಬೇಕೆಂದು ಜಿಲ್ಲಾಧಿಕಾರಿಗಳಿಗೆ ಜನರು ಕೇಳಿಕೊಂಡಿದ್ದಾರೆ.

ಭಟಕಳ ಬಂದರವನ್ನು ಮುಂಬಯಿ ಸರಕಾರದವರು ಮೈಸೂರ ಸರಕಾರಕ್ಕೆ ಕೊಡಲಿರುವರೆಂದು ತಿಳಿಯುತ್ತಿದ್ದು ಏಕೀಕರಣ ಪರಿಷತ್ತಿನಲ್ಲಿ ಪಾಸಾದ ಠರಾವಿಗೆ ಇದು ವಿರುದ್ಧವಿರುವದರಿಂದ ಎಲ್ಲರೂ ಅದನ್ನು ವಿರೋಧಿಸಬೇಕಾಗಿ ಸಂಘದ ಅಧ್ಯಕ್ಷರಾದ ಶ್ರೀ ಜಿನರಾಜ ಹೆಗಡೆಯವರು ಕೇಳಿಕೊಂಡಿದ್ದಾರೆ.

ರೋಣ ಮಾಮಲೇದಾರರಾದ ಶ್ರೀ ಎಸ್. ವ್ಹಿ. ಗಿಡ್ನವರು ತಮ್ಮ ಜ್ಯೇಷ್ಠಪುತ್ರಿ ಸರ್ವಮಂಗಲಾದೇವಿಯ ಲಗ್ನಕಾಲದಲ್ಲಿ ಕರ್ನಾಟಕ ವಿದ್ಯಾಪೀಠ ಸಮಿತಿ, ಕೆ. ಎಲ್. ಈ. ಸೋಸಾಯಿಟಿ ಬೆಳಗಾವ, ಕರ್ನಾಟಕ ಕಾಲೇಜ ಬಡವಿದ್ಯಾರ್ಥಿಗಳ ನಿಧಿ ಹಾಗು ಕೆಲವು ಪತ್ರಿಕೆಗಳಿಗೆ ಕೂಡಿ ೪೬೦ ರೂ. ಕಾಣಿಕೆ ಸಲ್ಲಿಸಿದ್ದಾರೆ.

## ವಿಜಾಪುರ

ಗುಳೇದಗುಡ್ಡದಲ್ಲಿ ೯ ನೇ ತಾರೀಕು ವ್ಯಾಪಾರಸ್ಥರ ಸಭೆ ಸೇರಿ ಮರ್ಚಂಟ್ಸ ಅಸೋಸಿಯೇಶನ ಸ್ಥಾಪಿಸಲಾಯಿತು. ಸಂಗಯ್ಯನವರು ವಸ್ತ್ರದ ಇವರು ಅಧ್ಯಕ್ಷರು, ಎಸ್. ಬಿ. ಸತ್ತಿಗೇರಿ ಇವರು ಕಾರ್ಯದರ್ಶಿಗಳಾಗಿದ್ದಾರೆ.

ಮುಂಬಯಿ ಮುಖ್ಯ ಮಂತ್ರಿಗಳಾದ ಶ್ರೀ ಬಾಳಾಸಾಹೇಬ ಖೇರ ಇವರು ಇದೇ ೧೯ ನೇ ತಾರೀಕಿಗೆ ಬಾಗಲಕೋಟೆಗೆ ಬರಲಿರುವರು. ಅವರು ಬಾಗಲಕೋಟೆಯಲ್ಲಿ ಬಸವೇಶ್ವರ ಕಾಲೇಜಿನ ಬಿ. ಎ. ವರ್ಗಗಳ ಉದ್ಘಾಟನ ಸಮಾರಂಭವನ್ನು ಮತ್ತು ಸಕ್ರಿ ಹಾಯಸ್ಕೂಲ ಕಟ್ಟಡದ ಉದ್ಘಾಟನೆ ಸಮಾರಂಭವನ್ನು ನೆರವೇರಿಸುವರು.

ಮುದ್ದೇಬಿಹಾಳದಲ್ಲಿ ಶ್ರೀ ಎಸ್. ಬಿ. ಜೋರಾಪುರ ವಕೀಲರು ಒಂದು ಸ್ಪೇಶಲ್ ಇಂಗ್ಲೀಷ ಕ್ಲಾಸನ್ನು ತೆರೆದಿರುವರು. ಅವರು ಒಂದೇ ವರ್ಷದಲ್ಲಿ ಮೂರು ಇಯತ್ತೆಯ ವರೆಗೆ ಇಂಗ್ಲಿಷ ಅಭ್ಯಾಸ ಮಾಡಿಸುವರು. ನಗರದಲ್ಲಿ ಇಂಗ್ಲೀಷ ಶಾಲೆಯಿಲ್ಲದಿದ್ದುದಕ್ಕಾಗಿ ಅವರು ಈ ಏರ್ಪಾಡನ್ನು ಮಾಡಿರುವರು.

ಹುನಗುಂದ ತಾಲೂಕಿನ ಬರಗಾಲ ಕೆಲಸವೆಂದು ನಡೆದ ತಿಮ್ಮಾಪೂರ ಕೆರೆ ಕೆಲಸದಲ್ಲಿ ನಿತ್ಯ ೩೦೦ ಕೂಲಿಕಾರರು ಕರಡಿ ರಸ್ತೆಯ ಮೇಲೆ ೧೪೦೦ ಜನರು ಕೆಲಸ ಮಾಡುತಿರುವರು. ಅವರಿಗೆ ಕನಿಷ್ಠ ಕೂಲಿ ೪-೩-೨ ಆಣೆ ದೊರೆಯುತ್ತಿದ್ದು ಇದು ಬಹಳ ಕಡಿಮೆಯಾದ್ದರಿಂದ ಅದನ್ನು ೮-೬-೪ ಆಣೆಗಳಿಗೇರಿಸಬೇಕೆಂದು ಕೇಳಿಕೊಳ್ಳಲಾಗಿದೆ.

ದಿವಂಗತ ಕೌಜಲಗಿ ಹಣಮಂತರಾಯರ ಮೊದಲನೆಯ ಪುಣ್ಯತಿಥಿಯನ್ನು ವಿಜಾಪುರದ ಚರಕ ಸಂಘದವರು ಜೂನ ೧೦ ನೇ, ತಾರೀಕು ಜರುಗಿಸಿದರು ಅಖಂಡ ಸೂತ್ರಯಜ್ಞ, ಸಂಪೂರ್ಣ ಗೀತಾ ಪಾರಾಯಣಗಳಾಗಿ ಸಾಯಂಕಾಲ ಸಭೆ ಜರುಗಿ, ಅವರ ಗುಣಗಾನ ಮಾಡಲಾಯಿತು.

ತಾಳೀಕೋಟೆಯಲ್ಲಿದ್ದ ಸರಕಾರಿ ಕನ್ನಡ ಟ್ರೇನಿಂಗ ಕಾಲೇಜನ್ನು ವಿಜಾಪುರಕ್ಕೆ ವರ್ಗಾಯಿಸಿದ್ದು ಅದು ೧೨ ನೇ ತಾರೀಖಿನಿಂದ ಪ್ರಾರಂಭವಾಗಿದೆ.

ಇದೇ ೧ ನೇ ತಾರೀಕಿಗೆ ಇಲಕಲ್ಲಿನಲ್ಲಿ ಕೂಡಲಿದ್ದ ದೇವಾಂಗ ಸಮಾಜದ ವಾರ್ಷಿಕ ಸಭೆ ಕೂಡಬಾರದೆಂದು ಸಬ್ ಡಿವ್ಹಿಜನಲ್ ಮ್ಯಾಜಿಸ್ಟ್ರೇಟರು ೧೪೪ ಕಲಮಿನನ್ವಯ ವಿಧಿಸಿದ್ದು ಈ ಹುಕುಮು ೨ ತಿಂಗಳ ಜಾರಿಯಲ್ಲಿ ಉಳಿಯುವದು.

## ಬೆಳಗಾವಿ

ಬೈಲಹೊಂಗಲದಲ್ಲಿ ಹವೆ ಕೆಟ್ಟಿದ್ದು ಪ್ಲೇಗ ಬೇನೆ ತಲೆದೋರಿದೆ. ಮುನಸೀಪಾಲಿಟಿಯವರು ಮೈಲೀ ಚುಚ್ಚುವ ಕಾರ್ಯವನ್ನು ಜೋರಿನಿಂದ ನಡೆಸಿರುವರು.

ಬೆಳಗಾವಿಯ ಕಲೆಕ್ಟರ ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದ ಶ್ರೀನಿವಾಸ ಕೊನೇರಿಯವರು ಕ್ರಿಸ್ತವಾಸಿಗಳಾದರೆಂದು ತಿಳಿಸಲು ವಿಷಾದಿಸುತ್ತೇವೆ. ಇವರು ಮರಣ ಸಮಯದಲ್ಲಿ ಕೇವಲ ೨೬ ವರ್ಷದವರಿದ್ದರು.

ಮುಂಬಯಿ ಆಕಾಶವಾಣಿಯಲ್ಲಿ ಹಳ್ಳಿಗರಿಗಾಗಿ ಕನ್ನಡ ಕಾರ್ಯಕ್ರಮಗಳನ್ನು ಇದೇ ಜುಲೈಯಿಂದ ಪ್ರಾರಂಭಿಸತಕ್ಕವರಿದ್ದು ಇದಕ್ಕಾಗಿ ಬೆಳಗಾವಿ ಜಿಲ್ಹೆಯ ಕನ್ನಡ ಹಳ್ಳಿಗಳಿಗಾಗಿ ೭೫ ಸೆಟ್ಟುಗಳು ಮತ್ತು ಮರಾಠಿ ಹಳ್ಳಿಗಳಿಗಾಗಿ ೨೫ ಸೆಟ್ಟುಗಳು ಬಂದಿರುವವು.

ಬೆಳಗಾವಿಯಲ್ಲಿ ಬೆಲ್ಲದ ಸೀದಾ ಸುರು ಮಾಡುವವರಿದ್ದು ಪ್ರತಿಯೊಬ್ಬನಿಗೆ ಒಂದೊಂದು ಪೌಂಡಿನಂತೆ ಕೊಡಲಾಗುವದು.

ಕಿತ್ತೂರ ಚನ್ನಮ್ಮ ರಾಣಿ ಇತಿಹಾಸ ಮಂಡಳ ಸಮಿತಿಯ ಮೊದಲನೇ ಸಭೆಯು ತಾ. ೨೩-೬-೪೬ ಮಧ್ಯಾನ್ಹ ೨ ಗಂಟೆಗೆ ಬೈಲಹೊಂಗಲದಲ್ಲಿ ಸೇರುವದು.

## ಉತ್ತರಕನ್ನಡ

ಹಿಂದೀ ವೈಮಾನಿಕ ದಳಕ್ಕೆ ಸೇರಿರಬಹುದಾದ ೧೯೪೪ ರಲ್ಲಿ ತಯಾರಿಸಲಾದ ೫ ಇಂಚು ಉದ ಮತ್ತು ೨೦ ಪೌಂಡು ಭಾರದ ರಾಕೆಟ ಬಾಂಬು ಕಾರವಾರದಿಂದ ೧೯ ಮೈಲು ದೂರದಲ್ಲಿರುವ ಬೆಳ್ಳಿಕೇರಿ ಬಂದರದಲ್ಲಿ ಸಿಕ್ಕಿದೆ. ಕಲೆಕ್ಟರರು ಇದನ್ನು ನೋಡಿಕೊಂಡು ಹೋಗಿ ಇದರಿಂದ ಯಾವ ಗಂಡಾಂತರವೂ ಇಲ್ಲೆಂದು ಹೇಳಿದರು. ಇದನ್ನು ಈಗೊಂದು ನಿರ್ಜನ ಸ್ಥಳದಲ್ಲಿಟ್ಟಿದ್ದು ತತ್ಸಂಬಂಧಿ ಅಧಿಕಾರಿಗಳಿಗೆ ತಿಳಿಸಿದ್ದಾರೆ.

## ಬಳ್ಳಾರಿ

ಮದ್ರಾಸ ಸರಕಾರದ ಕಂದಾಯ ಮಂತ್ರಿಗಳಾದ ಶ್ರೀ ಕೆ. ಆರ್. ಕಾರಂತರು ಬಳ್ಳಾರಿಗೆ ಬಂದಾಗ ಬರಗಾಲಗ್ರಸ್ತ ಪ್ರದೇಶ ಪರಿಸ್ಥಿತಿ ನಿವೇದಿಸಿ ಅಲ್ಲಿಯ ಬೇಡಿಕೆಗಳ ಬಿನ್ನವತ್ತಳೆಯೊಂದನ್ನು ಕ್ಷಾಮನಿವಾರಣ ಸಂಘದವರು ಅವರಿಗೆ ಸಮರ್ಪಿಸಿದರು. ಮಂತ್ರಿಗಳು ಅಲಿಪುರ ಮತ್ತು ಸೆಂಟ್ರಲ್ ಜೇಲ ಸೆರೆಮನೆಗಳನ್ನು ಸಂದರ್ಶಿಸಿದರು.

ಹೊಸಪೇಟೆಯ ಮುನಸಿಪಲ್ ಹಾಯಸ್ಕೂಲಿನಲ್ಲಿ ೧೯೨೫ ರಿಂದ ಸಂಸ್ಕೃತ ಪಂಡಿತರಾಗಿ ಕೆಲಸ ಮಾಡುತಿದ್ದ ಶ್ರೀ ಬಂಟವಾಳ ವೆಂಕಟರಮಣ ಸೋಮಯಾಜಿಯವರು ತಮ್ಮ ೪೮ ನೇ ವಯಸ್ಸಿನಲ್ಲಿ ದಕ್ಷಿಣ ಕನ್ನಡ ಜಿಲ್ಹೆಯಲ್ಲಿಯ ಸ್ವಗ್ರಾಮದಲ್ಲಿ ನಿಧನ ಹೊಂದಿದರೆಂದು ತಿಳಿಸಲು ವಿಷಾದಿಸುತ್ತೇವೆ.

## ಕನ್ನಡ ಸಂಸ್ಥಾನ

ದಕ್ಷಿಣ ಸಂಸ್ಥಾನಾಧಿಪತಿಗಳ ದಿವಾಣ ಸಮಿತಿಯ ಸಭೆ ಜೂನ ೧೫ ನೇ ತಾರೀಖಿಗೆ ಸಭೆ ಸೇರಿ ಘಟನಾ ಸಮಿತಿಯು ಮಾಡತಕ್ಕ ಕಾರ್ಯಕಲಾಪಗಳನ್ನು ನಿರ್ಣಯಿಸಿತು.

ಮಿರಜಿ ಶಾಸನ ಸಭೆಯಲ್ಲಿ ಸ್ವೀಕೃತವಾದ ಎಲ್ಲ ಕದಿತದ ಸೂಚನೆಗಳಿಗೆ ಸಂಸ್ಥಾನಾಧಿಪತಿಗಳು ವಿಶೇಷಾಧಿಕಾರದಿಂದ ಜೀವದಾನ ಕೊಡುವರೆಂದು ತಿಳಿಯುತ್ತದೆ.

ಶಿವಮುಗ್ಗಿ ತಾಲೂಕು ಗಾಜನೂರು ಗ್ರಾಮದ ಬಳಿ ಜೋರನೆಡೆಹಳ್ಳಿಯಲ್ಲಿ ಪುರಾತನ ಶಿಲಾಶಾಸನವೊಂದು ಸಿಕ್ಕಿದೆ. ಅದು ಚಾಲುಕ್ಯ ಕಾಲದ್ದೆಂದೂ ಅಲ್ಲಿಯೆ ಸುಂದರ ಸರಸತಿ ಮತ್ತು ಲಕ್ಷ್ಮಿಶಿಲಾ ಮೂರ್ತಿಗಳಿದ್ದು ಅವನ್ನು ವಸ್ತುಸಂಗ್ರಹಾಲಯಕ್ಕೆ ತೆಗೆದುಕೊಂಡು ಹೋಗಲಾಗುತ್ತದೆಂದೂ ಗೊತ್ತಾಗುತ್ತದೆ. ಈ ಮಂದಿರ ತುಂಗಾ ಅಣೆಕಟ್ಟು ಮಾಳುಗಡೆ ಪ್ರದೇಶದಲ್ಲಿದೆ. ಆ ಮಂದಿರವನ್ನು ಬೇರೆ ಸ್ಥಳಕ್ಕೆ ವರ್ಗಾಯಿಸಬಹುದಾಗಿದೆ.

ಕೊಲ್ಹಾಪುರ ಪತ್ರಿ ಸರಕಾರದ ಕೆಲ ಜನರು ಮಾದಕ ಪದಾರ್ಥಗಳ ವಿರುದ್ಧ ಯುದ್ಧವನ್ನೆ ಪ್ರಾರಂಭಿಸಿದ್ದಾರೆ. ಅವರು ಕೆಲವು ಹಾಟೆಲುಗಳಿಗೆ ನೋಟೀಸು ಕಳಿಸಿ ಅತಿಥಿಗಳಿಗೆ ಮಾದಕ ಪೇಯ ಪೂರೈಸುವದನ್ನು ಬಿಡಬೇಕಾಗಿ ಕೇಳಿಕೊಂಡಿರುವರು. ಮತ್ತು ಅದರಂತೆ ನಡೆಯದಿದ್ದರೆ ಪತ್ರಿಪ್ರಸಾದ ದೊರಕುವದೆಂದು ಎಚ್ಚರಿಕೆ ಕೊಟ್ಟಿರುವರು.

ಶಿವಮೊಗ್ಗಿಯಲ್ಲಿಯ ನಗರ ಸಭೆಯ ೫ ಲಕ್ಷ ರೂಪಾಯಿಗಳ ಭೂಗರ್ಭ ಚರಂಡಿ ಯೋಜನೆಯನ್ನು ಸರಕಾರದವರು ಅಂಗೀಕರಿಸಿ ಮುಕ್ಕಾಲು ಭಾಗ ದ್ರವ್ಯಸಹಾಯ ನೀಡುವುದಾಗಿ ತಿಳಿಸಿದ್ದಾರೆ.


AC. 58-2

ಹಸಿದವರು ಸಾವಿರಗಟ್ಟಲೆ ಇಲ್ಲ-

ಆದರೆ
ಕೋಟಿಗಟ್ಲೆ
ಇರುವರು

ಬರಗಾಲದ ಕ್ಷೇತ್ರಗಳಲ್ಲಿ ಕೋಟಿಗಟ್ಲೆ ಜನರು ದೇಶದಲ್ಲಿ ಉಂಟಾಗಿರುವ ಆಹಾರದ ಕೊರತೆಯಿಂದ ಬಳಲಬಹುದು. ದುರ್ದೈವಿಗಳಾದ ಇಂಥ ಜನರಿಗೆ ಆಹಾರವನ್ನು ಪೂರೈಸುವುದು, ನಿಜವಾಗಿ ಒಂದು ಮಹತ್ವದ ಕರ್ತವ್ಯವಾಗಿದೆ. ಇಂಥ ದಾರುಣ ವಿಪತ್ತಿನಲ್ಲಿ ನಮ್ಮಲ್ಲಿ ಪ್ರತಿಯೊಬ್ಬನು ನಿಶ್ಚಿತವಾದ ಉಪಕಾರವನ್ನು ಮಾಡಬೇಕಾಗಿವೆ. ನೀವು, ಕೆಳಗೆ ಕಾಣಿಸಿದ ನಾಲ್ಕು ಮಾರ್ಗಗಳಿಂದ ಇದನ್ನು ಅಲ್ಪ ಪ್ರಯತ್ನದಿಂದ ಸಾಧಿಸಬಹುದು :-

೧. ನಿಮ್ಮ ಸತ್ಕಾರ-ಸಮಾರಂಭಗಳನ್ನು ಕಡಿಮೆಮಾಡಿರಿ. ನೀವು ಅತಿಥಿಗಳನ್ನು ಬರಮಾಡಿರುವುದಾದರೆ ಅವರಿಗೆ ಸಾದಾ ಆಹಾರವನ್ನು ಕೊಡಿರಿ. ಅದರ ಕಾರಣವನ್ನು ಅರಿತುಕೊಂಡು ಅವರು ನಿಮ್ಮನ್ನು ಮೆಚ್ಚುವರು.

೨. ನಿಮ್ಮ ಸ್ವಂತ ಮನೆಯಲ್ಲಿ ಸ್ವಲ್ಪೇ ನಮೂನೆಯ ಅಡಿಗೆ ಮಾಡಿ ಆಹಾರವನ್ನು ಉಳಿಸಿರಿ. ಅಡಿಗೆಯ ಮನೆಯಲ್ಲಿ ಯಾವದೂ ಹಾಳಾಗದಂತೆ ನೋಡಿಕೊಳ್ಳಿರಿ.

೩. ಸಾಮಾಜಿಕ, ಧಾರ್ಮಿಕ ಸಮಾರಂಭಗಳಲ್ಲಿ ಹಾಗೂ ಮದುವೆಗಳಲ್ಲಿ ಕೈ ಹಿಡಿದು ವೆಚ್ಚಮಾಡಿರಿ.

೪. ಹೆಚ್ಚು ಕಾಯಿಪಲ್ಲೆ, ಹಣ್ಣು, ಮೀನು, ಮಾಂಸ, ತತ್ತಿ ಮತ್ತು ಹಾಲಿನ ಪದಾರ್ಥಗಳನ್ನು ನಿಮ್ಮ ಸೇರಿಕೆಗೆ ಯೋಗ್ಯವಾಗುವಂತೆ ಸೇವಿಸಿ ನಿಮ್ಮ ಆಹಾರವನ್ನು ಸುಧಾರಿಸಿರಿ. ಅಕ್ಕಿ ಮತ್ತು ಗೋಧಿಯನ್ನು ಸೇವಿಸುವುದನ್ನು ನೀವು ಕಡಿಮೆಮಾಡಿರಿ.

ಈ ದುರ್ಧರ ಪ್ರಸಂಗದಲ್ಲಿ ಸಂಕಟ ಮತ್ತು ಉಪವಾಸದಿಂದ ಬಳಲುತ್ತ ಸಹಾಯಕ್ಕಾಗಿ ನಮ್ಮ ಕಡೆಗೆ ನೋಡುತ್ತಿರುವ ಜನರಿಗೆ ನಾವು ಮೇಲ್ಕಾಣಿಸಿದ ಮಾರ್ಗಗಳಿಂದ ನೆರವಾಗಿ ಅವರ ವಿಪತ್ತನ್ನು ಕಳೆಯಬಹುದು.

ಆಹಾರವನ್ನು ಉಳಿಸಿರಿ
ಅಂದರೆ ನೀವು
ಜೀವಿಗಳನ್ನು
ಬದುಕಿಸಿದಂತಾಗುತ್ತದೆ

ಆಹಾರದ ಖಾತೆ. ಹಿಂದುಸ್ಥಾನ ಸರಕಾರ. ಹೊಸ ದಿಲ್ಲಿ. ಇವರ ಪ್ರಕಟನೆ

# ಹಿಂದುಸ್ತಾನ

## ಮುಂಬಯಿ

ಅಹಮ್ಮದಾಬಾದ ಗಿರಣಿ ಒಡೆಯರ ಸಂಘದವರು ೪೮ ಲಕ್ಷ ರೂ. ಕೂಡಿಸಿ ಬೇಗನೆ ಒಂದು ಟೆಕ್ನಾಲಾಜಿಕಲ್ ಸಂಸ್ಥೆ ತೆರೆಯಲಿರುವರು. ಹಿಂದುಸ್ತಾನ ಸರಕಾರದವರು ಅದಕ್ಕೆ ೧೮ ಲಕ್ಷ ರೂ. ಕೊಡಲು ಒಪ್ಪಿದ್ದಾರೆ.

ಯುದ್ಧದಲ್ಲಿ ಉಪಯೋಗಿಸಲಾದ ಸ್ಟೆನ್ ಬಂದೂಕಗಳನ್ನು ಪ್ರಾಂತದಲ್ಲಿಯ ಪೋಲೀಸರಿಗೆ ಪೂರೈಸಲಾಗುತ್ತಿರುವದು.

ಅ. ಭಾ. ಮಹಿಳಾ ಪರಿಷತ್ತಿನ ಸೌ. ಹಂಸಾ ಮೆಹತಾ ಅವರು ಬ್ರಿಟಿಶ ಯೋಜನೆ ಸ್ವೀಕರಿಸಬೇಕಾಗಿ ಅಭಿಪ್ರಾಯ ವ್ಯಕ್ತಮಾಡಿದ್ದಾರೆ.

ಮುಂಬಯಿ ಪ್ರಾಂತದ ಜೇಲುಗಳಲ್ಲಿಯ ಕಾರಕೂನರು, ನೌಕರರು ತಮ್ಮದೊಂದು ಸಂಘ ಸ್ಥಾಪಿಸಿಕೊಂಡಿರುವರು.

ಅಸೆಂಬ್ಲಿ ಚುನಾವಣೆಯಲ್ಲಿ ಡಾಂಗೆಯವರನ್ನು ಯಶಸ್ವಿಯಾಗಿ ಜಾಹೀರ ಮಾಡಿದ್ದರ ವಿರುದ್ಧ ನೂರಿಯವರು ಹಾಯಕೋರ್ಟಿಗೆ ಹೋಗಿರುವದು.

ಜಮುನಾದಾಸ ಮೇಥಾರವರು ತಾಯಿಯ ಅಸ್ವಾಸ್ಥ್ಯದ ಮೂಲಕ ಬ್ರಹ್ಮದೇಶದಲ್ಲಿಯ ಹಿಂದುಸ್ತಾನ ಸರಕಾರದ ಪ್ರತಿನಿಧಿ ಸ್ಥಳಕ್ಕೆ ರಾಜೀನಾಮೆ ಕೊಡಲು ನಿರ್ಧರಿಸಿ ಹಿಂದುಸ್ತಾನ ಸರಕಾರಕ್ಕೆ ಕೇಳಿಕೊಂಡಿರುವರೆಂದೂ ಅವರಿಂದ ಇನ್ನೂ ಉತ್ತರ ಬಂದಿಲ್ಲೆಂದೂ ತಿಳಿಯುತ್ತದೆ.

ಬುಲಸಾರ ಮುನಸಿಪಾಲಿಟಿ ಅಧ್ಯಕ್ಷರಾದ ಜನಾರ್ದನ ದೇಸಾಯಿಯವರು ಓರ್ವ ನಾಗರಿಕನಿಂದ ಮೇಲಿಂದ ಮೇಲೆ ಮುನಿಸಿಪಲ್ ಭಂಗಿಯು ಸರಿಯಾಗಿ ಕೆಲಸ ಮಾಡುತ್ತಿಲ್ಲೆಂದು ತಕರಾರು ಬಂದದ್ದರಿಂದ ೬ನೇ ತಾರೀಕು ತಾವೇ ಸ್ವತಃ ಅವರ ಮನೆಗೆ ಹೋಗಿ ಅವರ ಶೌಚಕೂಪ ಸ್ವಚ್ಛ ಮಾಡಿ ಭಂಗಿ ಕೆಲಸ ನೆರವೇರಿಸಿ ಬಂದರು.

ಜಳಗಾವದಲ್ಲಿ ೪ನೇ ತಾ. ಭಯಂಕರ ಬಿರುಗಾಳಿ ಬೀಸಿ ಮೂರು ಜನ ಸತ್ತದ್ದಲ್ಲದೆ ಅನೇಕ ಲಕ್ಷ ರೂಪಾಯಿಗಳ ಹಾನಿಯಾಗಿದೆಂದು ತಿಳಿಯುತ್ತದೆ. ಮಾಳಿಗೆ ತಗಡುಗಳು ಹಾರಿ ಹೋಗಿವೆ. ಗಿಡಗಳು ಉರುಳಿದ್ದು ತಾರು ವಿದ್ಯುತ್ತಿನ ತಂತಿ ಕತ್ತರಿಸಿವೆ. ನೀರಿನ ಪೂರೈಕೆಗೂ ಧಕ್ಕೆ ತಗಲಿದೆ.

ರೇಶನ ಕಾರ್ಡಿನ ಎರಡು ಪ್ರತಿಗಳನ್ನು ಸಂಪಾದಿಸಿದ್ದಕ್ಕಾಗಿ ದೋಹದಿನ ಮಶಭಾಯಿ ಎಸುಫಲಿ ಅವರಿಗೆ ೫೦ ರೂಪಾಯಿ ದಂಡ ವಿಧಿಸಲಾಗಿದೆ. ಅಬಾಸಭಾಯಿಯವರಿಗೆ ೨೫ ರೂ. ದಂಡವಾಯಿತು.

ಭತ್ತದ ಸಂಗ್ರಹದ ಬಗ್ಗೆ ತಪ್ಪು ಹೇಳಿಕೆ ಕೊಟ್ಟ ಕುಲಾಬಾ ಜಿಲ್ಲೆಯ ಪನವೇಲದ ಕೆ. ಎ. ಬಾಡಿಪೂ ಅವರನ್ನು ಬಂಧಿಸಿ ಒಂದು ದಿನದ ಮಟ್ಟಿಗೆ ಸಾದಾ ಶಿಕ್ಷೆ ಮತ್ತು ೩೦೦೦ ರೂಪಾಯಿ ದಂಡ ವಿಧಿಸಲಾಯಿತು.

ಹೊಟ್ಟು ಮತ್ತು ಮೇವು ದನಗಳಿಗೆ ಕಡಮೆ ಬೀಳುವುದರಿಂದ ೧೮೮೧೦ ಟನ್ ನೆಲಗಡಲೆ ಹಿಂಡಿಯನ್ನು ಜೂನ ಜುಲೈ ತಿಂಗಳ ಮಟ್ಟಿಗೆ ಬೇರೆ ಬೇರೆ ಜಿಲ್ಲೆಗಳಿಗೆ ಸಮನಾಗಿ ಹಂಚಲಾಗಿದೆ. ಇದರಲ್ಲಿ ಬೆಳಗಾವಿಗೆ ೨೦೦೦ ಟನ್, ಧಾರವಾಡ ೧೬೦೦ ಟನ್ ವಿಜಾಪುರ ೧೨೫೦ ಟನ್, ಸೊಲ್ಲಾಪುರ ೧೪೦೦ ಟನ್, ಉತ್ತರ ಕನ್ನಡ ಜಿಲ್ಲೆ ೪೦೦ ಟನ್ ಹೀಗೆ ಸಿಕ್ಕುವವು. ಮುಖ್ಯವಾಗಿ ಹೂಡುವ ದನಗಳಿಗಾಗಿ ಇದರ ಉಪಯೋಗ.

ಇದೇ ಜೂನ ೨೨-೨೩ ಕ್ಕೆ ಪುಣೆಯಲ್ಲಿ ಜರುಗಲಿರುವ ಪ್ರಾಥಮಿಕ ಮಾಧ್ಯಮಿಕ ಮತ್ತು ಶಾರೀರಿಕ ಪ್ರಾಂತಿಕ ಶಿಕ್ಷಣ ಸಮಿತಿಗಳ ಸಮ್ಮೇಲನ ಮುಖ್ಯಮಂತ್ರಿ ಶ್ರೀ ಬಿ. ಜಿ. ಖೇರರ ಅಧ್ಯಕ್ಷತೆಯಲ್ಲಿ ಕೂಡುವದು. ಒತ್ತಾಯದ ಪ್ರಾಥಮಿಕ ಶಿಕ್ಷಣ ಪ್ರಸಾರ, ಲೋಕಶಾಲೆಗಳು, ಬೇಸಿಕ ಶಿಕ್ಷಣ, ಮಾಧ್ಯಮಿಕ ಶಿಕ್ಷಣ ಸುಧಾರಣೆ, ಪ್ರೌಢಶಿಕ್ಷಣ ಮುಂತಾದವುಗಳ ವಿಚಾರವಾಗುವದು.

---

ತಿರುವಾಂಕೂರ ಸರಕಾರದವರು ಸಂಸ್ಥಾನದಲ್ಲಿ ೩ ತಿಂಗಳ ವರೆಗೆ ಮೆರವಣಿಗೆಗಳಿಗೆ ಪ್ರತಿಬಂಧ ಮಾಡಿದ್ದಾರೆ.

## ಮದ್ರಾಸ

೧೯೪೨ ರಲ್ಲಿ ಪೋಲೀಸರು ನಡೆಸಿದ ಅತ್ಯಾಚಾರಗಳನ್ನು ತಮ್ಮ ಅವಗಾಹನೆಗೆ ತಂದು ಕೊಟ್ಟಲ್ಲಿ ಅವುಗಳ ವಿಚಾರಣೆ ನಡೆಸಲಾಗುವದೆಂದು ಮದ್ರಾಸ ಮುಖ್ಯ ಪ್ರಧಾನರು ತಿಳಿಸಿದ್ದಾರೆ.

ಕಾಂಗ್ರೆಸ ಅಧ್ಯಕ್ಷರಿಂದ ಕರೆಬಂದಿದ್ದರಿಂದ ಶ್ರೀ ಸಿ. ರಾಜಗೋಪಾಲಾಚಾರ್ಯರು ದಿಲ್ಲಿಗೆ ತೆರಳಿರುವರು.

೧೯೪೨ ರ ಚಳವಳಿಯ ಕಾಲಕ್ಕೆ ಹೇರಲಾಗಿದ್ದ ೧೦೩೫೦೦೦ ರೂಪಾಯಿ ಮರಳಿ ಕೊಡಬೇಕೆಂದು ಮದ್ರಾಸ ಸರಕಾರ ವಿಧಿಸಿದೆ.

ಟಿ. ವಿಶ್ವನಾಥ (ಮುಖ್ಯ ಉಪಮಂತ್ರಿ), ಡಿ. ರಾಮಯ್ಯ ಮತ್ತು ಎನ್ ಶಂಕರರೆಡ್ಡಿ (ಮುಖ್ಯಮಂತ್ರಿ), ಬಿ. ಎಸ್. ಮೂರ್ತಿ (ಕೂಲಿಕಾರ), ಬಿ. ವೆಂಕಟಾಚಲಂ ಪಿಳ್ಳೆ [ಸಾರ್ವಜನಿಕ ಉಪಯೋಗ ಖಾತೆ], ಆರ್. ಸುಬ್ಬಯ್ಯ (ಒಕ್ಕಲತನ ಬೆಳವಣಿಗೆ), ಎಲ್. ಸಿ. ಪಾಯಸ (ಸ್ಥಾನಿಕ ಸ್ವರಾಜ್ಯ), ಲಿಂಗರಾಜು (ಕಂದಾಯ), ಎಸ್. ಎನ್. ಕರಯಾಲರ (ವಿದ್ಯಾಖಾತೆ), ಜಿ. ರಾಜಪುನಾರ ಚೆಟ್ಟಿ (ಸುದ್ದಿ), ಎ. ಎಂ. ರಾಮಸ್ವಾಮಿ (ಸಾರ್ವಜನಿಕ ಆರೋಗ್ಯ), ಬಿ. ಪರಮೇಶ್ವರಂ (ಕಾಯಿದೆ), ಆರ್. ವೆಂಕಟರಡ್ಡಿ (ಹಿಂದೂ ಧರ್ಮ ಕಾಯಿದೆ) ಇವರು ಮದ್ರಾಸ ಸರಕಾರದ ಉಪಮಂತ್ರಿಗಳಾಗಿ ನೇಮಿಸಲ್ಪಟ್ಟಿದ್ದಾರೆ.

೧೯೪೨ ರಲ್ಲಿ ಶಿವಗಂಗಾ ತೋಟದಲ್ಲಿ ಸಂಭವಿಸಿದ ಗಲಭೆಯ ಬಗ್ಗೆ ಶಿಕ್ಷೆಗೆ ಗುರಿಯಾದ ಸೋಮಸುಂದರಂರವರನ್ನು ಬಂಧಮುಕ್ತ ಮಾಡಲು ಮದ್ರಾಸ ಸರಕಾರದವರು ಅಪ್ಪಣೆ ವಿಧಿಸಿದ್ದಾರೆ.

## ಬಂಗಾಲ--ಆಸಾಮ

ಡಾಕಾ ಜಿಲ್ಲೆಯಲ್ಲಿಯ ಸರಕಾರಿ ಗುದಾಮುಗಳಲ್ಲಿಯ ೧ ಲಕ್ಷ ಮಣ ಅಕ್ಕಿ ಮಾಯವಾದದ್ದು ಬೆಳಕಿಗೆ ಬಂದಿದೆ.

ಬಾರೇಘಾಟ ರೇಲ್ವೆ ಭಾಗದಲ್ಲಿ ಉಗಿಬಂಡಿಗೂ ಒಂದು ಮೋಟಾರಿಗೂ ಡಿಕ್ಕಿ ಸಂಭವಿಸಿ ಒಬ್ಬನು ಸತ್ತಿದ್ದು ೫ ಜನರಿಗೆ ಗಾಯಗಳಾಗಿವೆ.

ಬಂಗಾಲ ನಾಗಪುರ ರೇಲ್ವೆ ಕೆಲಸಗಾರರೂ ತಾ. ೨೭ ರಿಂದ ಸಂಪು ಹೂಡುವದಾಗಿ ನೋಟೀಸು ಕೊಟ್ಟಿದ್ದಾರೆ.

ಬಂಗಾಲ ಪ್ರಾಂತಿಕ ಕಾಂಗ್ರೆಸ ಕಮೀಟಿ ಅಧ್ಯಕ್ಷರಾದ ಸುರೇಂದ್ರ ಮೋಹನ ಘೋಷರು ಅಝಾದರ ಕರೆ ಮೇರೆಗೆ ದಿಲ್ಲಿಗೆ ಹೋಗಿದ್ದಾರೆ.

ಉಪವಾಸದಿಂದ ಇಬ್ಬರು ಸತ್ತಿರುವರೆಂದು ಬಾಂಕುರಾ ಮತ್ತು ಮೈಮನಸಿಂಗ ಜಿಲ್ಲೆಗಳಿಂದ ಸುದ್ದಿ ಬಂದಿದೆ. ಬಾಮೂರಾ ಎಂಬಲ್ಲಿ ಒಬ್ಬ ಹೆಣ್ಣುಮಗಳಿಗೆ ತನ್ನ ಐದು ಮಕ್ಕಳಿಗೆ ಅನ್ನ ತಂದು ಹಾಕಲು ಆಗದ್ದರಿಂದ ಆತ್ಮಹತ್ಯೆ ಮಾಡಿಕೊಂಡಳೆಂದು ಪ್ರಕಟವಾಗಿದೆ. ಮೇ ೩೧ ಕ್ಕೆ ಹಳ್ಳಿಗನೊಬ್ಬನು ಉಪವಾಸದಿಂದ ಸತ್ತನೆಂದು ನೇತ್ರಕೋಣದಿಂದ ಸುದ್ದಿ ಬಂದಿದೆ.

ಬಂಗಾಲ ಪ್ರಾಂತಿಕ ಕಾಂಗ್ರೆಸ ಸಮಿತಿಯ ಕಾರ್ಯಕಾರೀ ಮಂಡಳದ ಸಭೆ ಸೇರಿ ದಿನವೂ ಕೆಡುತಿರುವ ಆಹಾರ ಪರಿಸ್ಥಿತಿಯ ಬಗ್ಗೆ ವಿವಂಚನೆಯನ್ನು ವ್ಯಕ್ತಪಡಿಸುವ ಗೊತ್ತುವಳಿ ಸ್ವೀಕೃತವಾಯಿತು.

ಆಸಾಮ ಶಾಸನ ಸಭೆಯ ಯುರೋಪಿಯನೇತರ ಸದಸ್ಯರಲ್ಲಿ ೧೦೦ಕ್ಕೆ ೬೦ ರಷ್ಟು ಜನರು ಪಾಕಿಸ್ತಾನಕ್ಕೆ ವಿರುದ್ಧರಿರುವರೆಂದೂ ಒತ್ತಾಯದ ಪ್ರಾಂತಿಕ ಗುಂಪಿಗೆ ಇದಕ್ಕಿಂತಲೂ ಹೆಚ್ಚಿನ ವಿರೋಧವಿದೆಯೆಂತಲೂ ಮುಖ್ಯ ಮಂತ್ರಿ ಬಾಡೋಲಾಯಿ ಇವರು ಹೇಳಿದರು.

ಶ್ರೀ ಶಿಶಿರ ಕುಮಾರ ಬೋಸರು ಒಂದು ಹೇಳಿಕೆಯಲ್ಲಿ ತಾವು ೧೯೪೧ ರ ಜನೆವರಿ ೧೬ ರಮಧ್ಯರಾತ್ರಿ ಸುಭಾಸರನ್ನು ಕಾರಿನಲ್ಲಿ ಕೂಡಿಸಿಕೊಂಡು ೨೧೦ ಮೈಲು ದೂರ ಗಾಮೋಹ ಎಂಬ ರೇಲ್ವೆ ನಿಲ್ದಾಣಕ್ಕೆ ಮುಟ್ಟಿಸಿದ್ದಾಗಿಯೂ ಅಲ್ಲಿಂದ ಅವರು ರೇಲ್ವೆ ಹತ್ತಿದರೆಂದೂ ಪ್ರಸಿದ್ಧಿಸಿದ್ದಾರೆ. ಆಗ ಬೋಸರು ಉತ್ತರ ಹಿಂದುಸ್ತಾನದ ಮುಸಲ್ಮಾನರ ವೇಷ ಧರಿಸಿದ್ದರೆಂದೂ ಅವರು ಹೇಳಿಕೆ

## ಸಿಂಧ--ಪಂಜಾಬ--ಸರಹದ್ದ

ಪೇಶಾವರ ಜಿಲ್ಲೆ ಶಾಬಕಾದರ ಹಳ್ಳಿಯಲ್ಲಿ ಕಾಂಗ್ರೆಸ ಹಾಗು ಲೀಗ ಕೆಲಸಗಾರರಲ್ಲಿ ಹೊಡೆದಾಟವಾಗಿ ಒಬ್ಬನು ಸತ್ತಿದ್ದು ಕೆಲವರಿಗೆ ಗಾಯಗಳಾಗಿವೆ.

ಖಾನ ಅಬ್ದುಲ ಗಫರಖಾನರ ಸಂಬಂಧಿಕರಾದ ಅತಾವುಲ್ಲಾ ಖಾನರು ಮಸೀದೆಯಲ್ಲಿ ನಡೆದ ಲೀಗ ಸಭೆಗೆ ಹೋದಾಗ ಗುಂಡಿನಿಂದ ಸಾಯಹೊಡೆಯಲ್ಪಟ್ಟಿರುವರು.

ಅಫಗಾಣಿಸ್ತಾನದಿಂದ ಪೇಶಾವರಕ್ಕೆ ೬೦೦೦ ಚೀಲ ಗೋದಿ ಬಂದಿದೆ.

ಸಿಂಧವನ್ನು ಪಂಜಾಬಕ್ಕೆ ಕೂಡಿಸುವ ಯೋಜನೆಯನ್ನು ಸಿಂಧ ಹಿಂದೂ ಸಭೆಯವರು ನಿಷೇಧಿಸಿದ್ದಾರೆ.

ರೋಹಿ ರೇಲ್ವೆ ಬುಕಿಂಗ ಕಾರಕೂನನು ೪೦೦೦ ರೂಪಾಯಿಗಳನ್ನು ಸರಕಾರಿ ಟ್ರೇಝರಿಗೆ ಒಯ್ಯುತ್ತಿದ್ದಾಗ ಯಾರೋ ಕೆಲವರು ಅವನಮೇಲೆ ದಾಳಿ ಮಾಡಿ ಗುಂಡಿನಿಂದ ಗಾಯಗೊಳಿಸಿ ಆ ರೂಪಾಯಿಗಳನ್ನು ಅಪಹರಿಸಿಕೊಂಡು ಹೋಗಿರುವರು.

ಪಠಾಣರು ಪ್ರಾಂತೀಯ ಗುಂಪುಗಳಿಗೆ ಸೇರಲು ಸಿದ್ಧರಿಲ್ಲೆಂದು ಸರಹದ್ದದ ಧುರೀಣರಾದ ಖಾನ ಅಬ್ದುಲ್ ಗಫರಖಾನರು ಪ್ರಾಂತದ ದಕ್ಷಿಣ ಜಿಲ್ಲೆಯಲ್ಲಿ ಸಂಚರಿಸಿ ಬಂದ ನಂತರ ಹೇಳಿದರು.

ಸಿಂಧವನ್ನು ಪಂಜಾಬಕ್ಕೆ ಕೂಡಿಸುವುದು ಅನಿಷ್ಟವೆಂದು ಸಿಂಧ ಶಾಸನ ಸಭೆಯ ವಿರುದ್ಧ ಪಕ್ಷದ ಧುರೀಣರಾದ ಜಿ ಎಂ ಸಯ್ಯದರು ಅಭಿಪ್ರಾಯ ಪಟ್ಟಿದ್ದಾರೆ.

ಕರಾಚಿ ಕಾರಪರೇಶನದವರು ಹಿಂದ ಸೇನಾ ಸಂರಕ್ಷಣನಿಧಿಗೆ ೫೦೦೦ ರೂಪಾಯಿ ಕೊಡುವದನ್ನು ನಿಶ್ಚಯಿಸಿದ್ದಕ್ಕೆ ಸಿಂಧ ಸರಕಾರದವರು ಮಂಜೂರಿ ಕೊಡದ್ದರಿಂದ ಕಾರಪರೇಶನದವರು ನಿಷೇಧ ವ್ಯಕ್ತಪಡಿಸಿದರು.

ತುಂಡೋವಸ್ತಿ ಖಾನದಲ್ಲಿ ಒಂದು ಮಾಲ ಗಾಡಿ ಮತ್ತೊಂದಕ್ಕೆ ಡಿಕ್ಕಿ ಹೊಡೆದದ್ದರಿಂದ ಅಪಘಾತ ಸಂಭವಿಸಿ ಒಬ್ಬ ಗಾರ್ಡನು ಮರಣ ಹೊಂದಿದ್ದಲ್ಲದೆ ಇಂಜನಿಯರ ಡ್ರಾಯವರ ಮೊದಲಾದವರಿಗೆ ಗಾಯಗಳಾಗಿವೆ.

ಕರಾಚಿಯಲ್ಲಿಯ ನಾವಿಕರ ದಂಗೆ ಸಂಬಂಧದಲ್ಲಿ ಬಂಧಿಸಲಾಗಿದ್ದ ಹಿಂದುಸ್ತಾನ ಹಡಗದ ೫ ನಾವಿಕರಲ್ಲಿ ಇಬ್ಬರಿಗೆ ೯೦ ದಿವಸ ಇಬ್ಬರಿಗೆ ೪೨ ದಿವಸ ಹಾಗು ಒಬ್ಬರಿಗೆ ೬೦ ದಿವಸ ಶಿಕ್ಷೆ ವಿಧಿಸಲಾಗಿದ್ದು ಫ್ಲ್ಯಾಗ ಅಫೀಸರರು ಶಿಕ್ಷೆಗಳನ್ನು ಸ್ಥಿರಪಡಿಸಿದ್ದಾರೆ.

## ಸಂಸ್ಥಾನಗಳು

ಕೋಚೀನ ಸರಕಾರದವರು ಮಾರಾಟ ಕರ ಹೇರುವ ವಿಚಾರ ನಡೆಸಿರುವರು.

ಹೈದರಾಬಾದ ಸರಕಾರದವರು ಸಂಸ್ಥಾನದ ಸರ್ವಾಂಗೀಣ ಉನ್ನತಿಗಾಗಿ ೩೫ ಕೋಟಿ ರೂಪಾಯಿಗಳ ದಶವಾರ್ಷಿಕ ಯೋಜನೆ ತಯಾರಿಸಿರುವರು.

ಜಯಪುರ ಸಂಸ್ಥಾನದ ದಿವಾಣರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲರು ಹೈದರಾಬಾದ ಸಂಸ್ಥಾನದ ದಿವಾಣರಾಗುವರಾಗಿ ವಿಶ್ವಸನೀಯವಾಗಿ ತಿಳಿಯುತ್ತದೆ. ಸರ್ ವ್ಹಿ. ಟಿ. ಕೃಷ್ಣಮಾಚಾರ್ಯರು ಜಯಪುರ ದಿವಾಣರಾಗುವರು.

ಮೈಸೂರ ನ್ಯಾಯವಿಧಾಯಕ ಸಭೆಯು ತಾ. ೨೦ಕ್ಕೆ ಪ್ರಾರಂಭವಾಗುವದು. ಆಡಳಿತೆಯನ್ನು ಬ್ರಿಟಿಶ ಹಿಂದುಸ್ತಾನದ ಮಟ್ಟಕ್ಕೆ ತರಬೇಕು, ರಾಜಕೀಯ ಕೈದಿಗಳನ್ನು ಬಿಡಬೇಕು, ದೇವಾಲಯಗಳನ್ನು ಹರಿಜನರಿಗೆ ಮುಕ್ತಮಾಡಬೇಕು ಮೊದಲಾದ ಗೊತ್ತುವಳಿಗಳು ಬರುವವು,


ಭಾರತದ ಕ್ರಾಂತಿಕಾರ ವೀರನ ಆತ್ಮಕಥನ!

--- ಮತ್ತೊಂದು ಅಪೂರ್ವಗ್ರಂಥ! ---

( " ಸಂಗ್ರಾಮ " ದಲ್ಲಿ ಬಂದ ಉತ್ತಮಚಂದರ ರೋಮಾಂಚಕಾರೀ ಲೇಖನಗಳಿಂದ )

ಸುಭಾಸ - ಸೀಮೋಲ್ಲಂಘನ

ಬೆಲೆ:--- ೧---೮---೦ ಅಂಚೇವೆಚ್ಚ ಸೇರಿ ೧---೧೨---೦ ಕಳಿಸಿರಿ

ಸುಭಾಸ ಬೋಸರು ಭಾರತದಿಂದ ಹೊರಹೊರಟು ವಿದೇಶೀ ಸರಕಾರಗಳೊಡನೆ ಸಂಬಂಧ ಬೆಳೆಯಿಸಿದ -- ವಿವಿಧ ಯುಕ್ತಿ ತಂತ್ರಗಳಿಂದ ಅದ್ಭುತ ರಮ್ಯವಾದ ಧೈರ್ಯ ಸಾಹಸದ ಕಾರ್ಯ ಸಾಧನೆಗಳಿಂದ ಮೈ ಜುಮ್ಮೆನ್ನಿಸುವ — ಪತ್ತೇದಾರಿ ಕಾದಂಬರಿಯಂತೆ ಸ್ವಾರಸ್ಯವಾದ ಉತ್ಸಾಹಕಾರಿಯಾದ ಸತ್ಯಕಥೆ.

ಸ್ವಲ್ಪ ಪ್ರತಿಗಳಿವೆ! ಬೇಗನೇ ತರಿಸಿಕೊಳ್ಳಿರಿ!!

ಸಮಾಜ ಪುಸ್ತಕಾಲಯ, ಧಾರವಾಡ



ಸಾಂಡೂ ಹಾರ್ಟಿನಾ

ಹೃದಯದ ಅಶಕ್ತತೆಯ ಮೇಲೆ ಟಾನಿಕ

ದ.ಕ್ಷ. ಸಾಂಡೂ ಬ್ರದರ್ಸ, ಚೆಂಬೂರ, ಲಿಮಿಟೆಡ.

(ಚೆಂಬೂರ, ಮುಂಬಯಿ.)

ಕರ್ನಾಟಕ ಶಾಖೆ:---ಕೊಪ್ಪೀಕರರೋಡ ಹುಬ್ಬಳ್ಳಿ,

## ರೇಲ್ವೆ ಕೆಲಸಗಾರರ ಸಂಪು

### ಹಿಂತೆಗೆದುಕೊಳ್ಳಬೇಕಾದರೆ ಕರಾರುಗಳೇನು?

ಇದೇ ೨೭ ನೇ ತಾರೀಖಿಗೆ ಸಂಪು ಹೂಡುವುದಾಗಿ ರೇಲ್ವೆ ಕೆಲಸಗಾರರು ನೋಟೀಸು ಕೊಟ್ಟಿರುವರಷ್ಟೆ. ಈ ಸಂಪು ಹೂಡಲ್ಪಡದಂತೆ ನೋಡಿಕೊಳ್ಳಬೇಕೆಂದು ಅನೇಕರು ಅಭಿಪ್ರಾಯಪಡುವರು. ಕೆಲ ಬೇಡಿಕೆಗಳನ್ನು ಪಂಚರ ಕಡೆಗೆ ಒಪ್ಪಿಸಲು ರೇಲ್ವೆ ಬೋರ್ಡಿನವರು ಒಪ್ಪಿದ್ದರಿಂದ ಸಂಪು ಹೂಡುವುದೇ ನ್ಯಾಯ್ಯವಲ್ಲೆಂದು ರೇಲ್ವೆ ಮಂತ್ರಿ ಬೆಂಥಾಲರು ಅಭಿಪ್ರಾಯ ಪಟ್ಟಿದ್ದಾರೆ. ರೇಲ್ವೆ ಸ್ಥಾಯಿ ಸಮಿತಿ ಇದೀಗ ಕೂಡಿದ್ದು ಪರಿಸ್ಥಿತಿಯ ವಿಚಾರ ನಡೆಸಿರುವುದು. ಈ ಸ್ಥಾಯಿ ಸಮಿತಿಯ ಮುಂದೆ ಭಾಷಣ ಮಾಡುತ್ತ ರೇಲ್ವೆ ಕೆಲಸಗಾರ ಫೆಡರೇಶನದ ಜನರಲ್ ಸೆಕ್ರೆಟರಿಗಳಾದ ಗುರುಸ್ವಾಮಿಯವರು ಹೀಗೆ ಅಭಿಪ್ರಾಯ ಪಟ್ಟಿರುವರು. ಕೆಲಸಗಾರರು ಬೇಡಿಕೆಗಳನ್ನೆಲ್ಲ ಪಂಚಮಂಡಳಕ್ಕೊಪ್ಪಿಸಿ ಅವರಿಗೆ ತಾತ್ಪೂರ್ತಿಕವಾಗಿ ೩೧ ಕೋಟಿ ರೂಪಾಯಿಗಳ ಆರ್ಥಿಕ ಸಹಾಯ ಸಲ್ಲಿಸಿದ್ದಾದರೆ ಸಂಪು ಹಿಂತೆಗೆದುಕೊಳ್ಳಲಾಗುವದು. ಈ ಹಣವನ್ನು ರಿಜರ್ವ ಮತ್ತು ಸವಕಳಿ ನಿಧಿಯಿಂದ ತೆಗೆದುಕೊಳ್ಳಬಹುದು. ರೇಲ್ವೆ ಸಾರ್ವಜನಿಕ ಉಪಯುಕ್ತತೆಯ ವಿಷಯವಾದ್ದರಿಂದ ಹಿಂದುಸ್ತಾನ ಸರಕಾರಕ್ಕೆ ಯಾವಾಗಲೂ ಕೊಡಬೇಕಾದ ಹಣವನ್ನು ಕೊಡಕೂಡದೆಂದು ಮುಂತಾಗಿ ಹೇಳಿದರು.

### ತಾತ್ಪೂರ್ತಿಕ ಕೆಲಸಗಾರರು

ರೇಲ್ವೆ ಸಂಪು ಪ್ರಾರಂಭವಾದರೆ ತಾತ್ಪೂರ್ತಿಕ ಸಮಯಕ್ಕೆಂದು ರೇಲ್ವೆ ಕೆಲಸಗಾರರನ್ನು ನೇಮಿಸಿಕೊಳ್ಳಲಾಗುವದು. ಅವರಿಗೆ ಆವಶ್ಯಕ ಶಿಕ್ಷಣ ಕೊಟ್ಟು ಶಕ್ಯವಿದ್ದಷ್ಟು ಗಾಡಿಗಳನ್ನು ನಡೆಸಲಾಗುವದೆಂದು ಮದ್ರಾಸ ಸದರ್ನ ಮರಾಠಾ ರೇಲ್ವೆಯ ಜನರಲ್ ಮ್ಯಾನೇಜರರು ಪತ್ರಿಕಾ ಪರಿಷತ್ತಿನಲ್ಲಿ ಹೇಳಿದರು. ಈ ಸಂಬಂಧದಲ್ಲಿ ಕೊಟ್ಟ ಜಾಹೀರಾತಿಗೆ ಬೇಕಾದಷ್ಟು ಅರ್ಜಿಗಳು ಬರುತಿದ್ದು ಕೆಲಸದ ಮೇಲೆ ಇದ್ದವರಿಗೆ ಯೋಗ್ಯ ಸಂರಕ್ಷಣೆ ಕೊಡಲಾಗುವದು. ಎಂ ಎಸ್ ಎಂ ರೇಲ್ವೆಯಲ್ಲಿ ೬೫ ಸಾವಿರ ಕೆಲಸಗಾರರಲ್ಲಿ ೩೨೦೦೦ ಕೆಲಸಗಾರರು ಮಾತ್ರ ರೇಲ್ವೆ ಕೆಲಸಗಾರರ ಸಂಘದ ಸದಸ್ಯರಿರುವರೆಂದೂ ಅವರು ಹೇಳಿದರು.

ಸಂಪು ಪ್ರಾರಂಭವಾಗುವ ಮೊದಲು ಆಹಾರ ಪದಾರ್ಥಗಳನ್ನು ಕೊರತೆಯ ಪ್ರದೇಶಕ್ಕೆ ಸಾಗಿಸಲಾಗುವುದೆಂದೂ ತಿಳಿಯುತ್ತದೆ.

---

## ದಕ್ಷಿಣ ಸಂಸ್ಥಾನಗಳಲ್ಲಿ ಸಂಘ ರಾಜ್ಯ

### ಎಲ್ಲ ಖಾತೆಗಳೂ ಮಂತ್ರಿಗಳ ಕಡೆಗೆ ಒಪ್ಪಿಸಲಾಗುವವು

### ಅಗಷ್ಟದಲ್ಲಿ ಘಟನಾ ಸಮಿತಿ

ದಕ್ಷಿಣ ಸಂಸ್ಥಾನಗಳಲ್ಲಿ ಒಂದು ಸಂಘ ರಾಜ್ಯವನ್ನು ಸ್ಥಾಪಿಸುವ ಸಂಬಂಧದಲ್ಲಿ ಒಂದು ಘೋಷಣೆ ಮಾಡಲಾಗಿದೆ. ಸಂಘ ರಾಜ್ಯದಲ್ಲಿ ಒಂದು ಮಂತ್ರಿಮಂಡಳ ಇರುವದೆಂದು ಅದರಲ್ಲಿ ಸಾರಲಾಗಿದೆ. ಈ ಮಂತ್ರಿಮಂಡಳವು ಸಂಘರಾಜ್ಯದ ಶಾಸನ ಸಭೆಗೆ ಜವಾಬದಾರವಿರುವುದು. ಸಾಮಾನ್ಯವಾಗಿ ಅದರ ಸ್ವರೂಪವು ಪ್ರಾಂತಿಕ ಶಾಸನ ಸಭೆಗಳಂತೆ ಇರುವದು. ಸಂಸ್ಥಾನಿಕರು ತಮ್ಮ ಕಡೆಗೆ ರಾಜ್ಯಕಾರಭಾರದ ಸರ್ವಸಾಮಾನ್ಯ ಖಾತೆಗಳಲ್ಲಿ ಯಾವ ಖಾತೆಯನ್ನೂ ತಮ್ಮ ಕಡೆಗಿಟ್ಟುಕೊಳ್ಳುವುದಿಲ್ಲೆಂದೂ ಬಹಳವಾದರೆ ಸಂರಕ್ಷಣ ಖಾತೆಯೊಂದನ್ನಿಟ್ಟುಕೊಳ್ಳುವರೆಂದೂ ತಿಳಿಯುತ್ತದೆ. ಇದರ ಕೊನೆಯ ನಿರ್ಣಯವು ಹಿಂದುಸ್ತಾನ ಸರಕಾರದ ಭಾವೀ ತಾತ್ಪೂರ್ತಿಕ ಸರಕಾರದ ಧೋರಣವನ್ನವಲಂಬಿಸಿರುವದು.

ಮಿರಜಿ, ಸಾಂಗಲಿ, ಬುಧಗಾಂವ ಈ ಮೂರು ನಗರಗಳು ಬಹಳ ಸಮೀಪದಲ್ಲಿದ್ದುದರಿಂದ ಇವು ಮೂರೂ ಕೂಡಿ ಸಂಘ ರಾಜ್ಯದ ಕೇಂದ್ರಸ್ಥಳವಾಗಬಹುದು. ಸಂಘರಾಜ್ಯ ಸ್ಥಾಪನೆಯ ನಂತರ ಕೊಲ್ಹಾಪುರ ಸಂಯುಕ್ತ ಸಂಸ್ಥಾನ ಇವುಗಳ ಸಂರಕ್ಷಣ ಸಾರಿಗೆ ಮೊದಲಾದ ವಿಷಯಗಳಲ್ಲಿ ಏಕೀಕರಣವಾಗಬಹುದು. ಈ ಸಂಘ ರಾಜ್ಯದಲ್ಲಿ ಸೇರುವ ಸಂಸ್ಥಾನಿಕರ ಖಾಸಗಿ ವೆಚ್ಚವನ್ನು ನರೇಂದ್ರ ಮಂಡಳ ಮತ್ತು ರಾಜಕೀಯ ಖಾತೆ ಇವುಗಳ ಧೋರಣೆಗನುಸಾರವಾಗಿ ನಿರ್ಣಯತೆಗೆದುಕೊಳ್ಳಲಾಗುವದು. ಈ ಘಟನಾ ಸಮಿತಿಯಲ್ಲಿ ಲೋಕನಿಯುಕ್ತರೆಷ್ಟು ಸರಕಾರ ನಿಯುಕ್ತರೆಷ್ಟು ಎಂಬದನ್ನು ದಿವಾಣ ಸಮಿತಿ ಬೇಗನೆ ನಿರ್ಣಯಿಸುವದು. ಬಹುಶಃ ಸಂಸ್ಥಾನಿಕರು ಈ ಸಮಿತಿಗಳಲ್ಲಿ ಉಳಿಯಲಿಕ್ಕಿಲ್ಲ.

ಈ ಘಟನಾ ಸಮಿತಿಯು ಆಗಸ್ಟದ ಪ್ರಾರಂಭದಲ್ಲಿ ಸ್ಥಾಪಿತವಾಗಿ ೩-೪ ತಿಂಗಳುಗಳಲ್ಲಿ ಕೆಲಸ ಮುಗಿಸುವದು. ಸಾಧಾರಣವಾಗಿ ೧೯೪೭ ರ ಜಾನೆವರಿಯಲ್ಲಿ ಸಂಘ ರಾಜ್ಯದ ಯೋಜನೆ ಜಾರಿಯಲ್ಲಿ ಬರುವದು.

---

AC 69 E

# ಸ್ವಸಹಾಯವು ಅಗತ್ಯವಾಗಿದೆ

## ಆಹಾರದ ಸಲುವಾಗಿ ನೀವು ಏನು ಮಾಡಬಹುದು

ಬರಗಾಲದಿಂದ ಭಾರತ ರಾಷ್ಟ್ರವೊಂದೇ ಭಯಗೊಂಡಿಲ್ಲ. ಸಾಮಾನ್ಯವಾಗಿ ಜಗತ್ತಿನ ತುಂಬ ಆಹಾರದ ಕೊರತೆಯಾಗಿದೆ. ಬ್ರಿಟನದಲ್ಲಿ ಶೀದಾ ಪ್ರಮಾಣವನ್ನು ಕಡಿಮೆ ಮಾಡಲಾಗಿದೆ. ಯುದ್ಧದಿಂದ ಹಾಳಾಗಿರುವ ಏಶಿಯಾ ಮತ್ತು ಯುರೋಪದೊಳಗಿನ ಭಾಗಗಳಲ್ಲಿ ಕೋಟಿಗಟ್ಲೆ ಜನರು ಹಸಿವೆ ಮತ್ತು ನಿರಾಹಾರಗಳಿಂದ ಬಳಲುತ್ತಿದ್ದಾರೆ. ಸಂಯುಕ್ತ ರಾಷ್ಟ್ರಗಳು ಅವರಿಗೆಲ್ಲ ಆಹಾರವನ್ನು ದೊರಕಿಸಿಕೊಡಬೇಕಾಗಿದೆ. ಹೊರಗಿನಿಂದ ಸಹಾಯವು ದೊರೆಯಬಹುದು. ಆದರೆ ಅದು ಜುಲುಮೆಗೆ ಒಳಗಾಗುವುದು. ನಮ್ಮಷ್ಟಕ್ಕೆ ನಾವೇ ಕೈಲಾದಷ್ಟು ಪ್ರಯತ್ನವನ್ನು ಮಾಡಬೇಕಾಗಿದೆ.

## ನೀವು ಪ್ರಯತ್ನ ಮಾಡುವ ಮಾರ್ಗವು ಇಲ್ಲಿದೆ

ಆಹಾರದ ಕೊರತೆಯನ್ನು (ಎಲ್ಲರೂ) ನ್ಯಾಯಪಾದ ರೀತಿಯಲ್ಲಿ ಹಂಚಿಕೊಳ್ಳಿರಿ— ಈ ರೀತಿಯಿಂದ ಮಾತ್ರ (ಹಸಿದ) ಜೀವಿಗಳನ್ನು ಬದುಕಿಸಬಹುದು.

ಶೀದಾ ಪದ್ಧತಿಯೊಂದೇ ಆಹಾರವನ್ನು ನ್ಯಾಯವಾದ ಮಾರ್ಗದಲ್ಲಿ ಹಂಚುವ ಯೋಜನೆಯಾಗಿದೆ. ಶೀದಾ ಪದ್ಧತಿಯ ನಿಯಮಗಳನ್ನು ಅನುಸರಿಸಿರಿ. ಮೋಸ ಮಾಡಲು ಪ್ರಯತ್ನಿಸಬೇಡಿರಿ—ಆದರಿಂದ ಯಾರ ಪ್ರಾಣಕ್ಕಾದರೂ ಹಾನಿಯಾಗಬಹುದು.

(ಆಹಾರವನ್ನು) ಸಂಗ್ರಹಿಸಬೇಡಿರಿ. ಅದು ಅಪರಾಧದ ಮತ್ತು ಪರಸ್ಪರ ಸ್ನೇಹಭಾವ ವಿರೋಧಿಸುವ ಕೆಲಸವಾಗಿದೆ. ಅದರಿಂದ ಜೀವಿಗಳು ನಾಶಹೊಂದಬಹುದು.

ನೀವು ಕಾಳಿನ ವ್ಯಾಪಾರಿಗಳಾಗಿದ್ದರೆ ಲಾಭಬಡಕರಾಗಬೇಡಿರಿ— ಘೋರ ದಂಡನೆಯನ್ನು ಜಾರಿಯಲ್ಲಿ ತರಲಾಗುವದೆಂಬುದನ್ನು ನೆನಪಿನಲ್ಲಿಡಿರಿ.

ಹಾಳಾಗುವುದನ್ನು ಉಳಿಸಿರಿ—ಸತ್ಕಾರ ಸಮಾರಂಭಗಳಲ್ಲಿ ಹೆಚ್ಚು ವೆಚ್ಚ ಮಾಡಬೇಡಿರಿ—ಸ್ವಲ್ಪೇ ನಮೂನೆಯ ಅಡಿಗೆಯನ್ನು ಸಿದ್ಧಪಡಿಸಿರಿ—ಉಳಿಸಿದ ಆಹಾರವು ಬೆಳೆಸಿದ ಆಹಾರಕ್ಕೆ ಸರಿಯಾಗಿದೆ.

ನಿಮಗೆ ನಿರ್ವಹಿಸಲು ಸಾಧ್ಯವಿದ್ದರೆ, ಕಾಯಿಪಲ್ಲೆ, ಹಣ್ಣು, ಮೀನು, ಮಾಂಸ, ತತ್ತಿ ಮತ್ತು ಹಾಲಿನ ಪದಾರ್ಥಗಳನ್ನು ಹೆಚ್ಚಾಗಿ ಸೇವಿಸಿರಿ. ಬಡವರಿಗೆ ಅತ್ಯವಶ್ಯವಾಗಿರುವ ಗೋಧಿ-ಅಕ್ಕಿಯನ್ನು ಅವರಿಗೆ ಬಿಟ್ಟುಕೊಡಿರಿ.

ನಿಮಗೆ ಭೂಮಿ ಮತ್ತು ನೀರಿನ ಅನುಕೂಲತೆ ಇದ್ದರೆ ಕಾಯಿಪಲ್ಲೆ ಮತ್ತು ಆಹಾರ ಧಾನ್ಯಗಳನ್ನು ಬೆಳೆಯಿರಿ, ಪ್ರತಿಯೊಂದು ಅಣುವಿನಿಂದ ಸಹಾಯವಾಗುವುದು.

ನಿಷ್ಕಾರಣವಾದ ಭಯವನ್ನು ಮೊದಲು ತಪ್ಪಿಸಿರಿ - ನೀವು ನಂಬಿಗೆಯನ್ನು ಕಳೆದುಕೊಂಡರೆ ಕಳ್ಳ ಪೇಟಿಗಾರನು ಶ್ರೀಮಂತನಾಗುವನು.

**ಆಹಾರದ ಕೊರತೆಯನ್ನು ಹೋಗಲಾಡಿಸಿರಿ**

ಒಮ್ಮನಸ್ಸಿನಿಂದ ದುಡಿಯಿರಿ  ಎಲ್ಲರೂ ಪಾಲುಗಾರರಾಗಿರಿ

ಹಿಂದುಸ್ಥಾನ ಸರಕಾರದ ಆಹಾರಖಾತೆ, ನೂ ದಿಲ್ಲಿ, ಇವರ ಪ್ರಕಟಣೆ

**ಮೈಸೂರ ಪ್ರಜಾಪ್ರತಿನಿಧಿ ಸಭೆ**

# ಆಯವ್ಯಯ ಅಧಿವೇಶನದ ಮುಕ್ತಾಯ

## ಸರಕಾರದ ಆಹಾರ ನೀತಿಯ ಟೀಕೆ

## ಮಂತ್ರಿಗಳಿಗೂ ಹೊಣೆಗಾರ ಸರಕಾರ "ಬೇಡವಾಗಿಲ್ಲ"ಂತೆ;

ತಾ. ೨೯ ಏಪ್ರಿಲಕ್ಕೆ ಪ್ರಾರಂಭವಾದ ಮೈಸೂರ ಪ್ರಜಾಪ್ರತಿನಿಧಿ ಸಭೆಯ ಆಯವ್ಯಯಾ ಅಧಿವೇಶನ ಎರಡುವಾರಗಳ ಕಾರ್ಯಕಲಾಪಗಳ ನಂತರ ತಾ. ೧೨ ಕ್ಕೆ ಮುಕ್ತಾಯವಾಯಿತು. ಮುಂಗಡ ಪತ್ರಿಕೆಯ ಚರ್ಚೆಯಿಂದಾರಂಭವಾದ ಅಧಿವೇಶನ ಆಹಾರ ಚರ್ಚೆಯಿಂದ ಕೊನೆಗೊಂಡಿತು.

ಅಧಿವೇಶನದ ಪ್ರಥಮ ವಾರವೆಲ್ಲ ಮುಂಗಡ ಪತ್ರಿಕೆಯ ಚರ್ಚೆಯೇ ನಡೆಯಿತು. ಈ ಬಾರಿಯ ಅಧಿವೇಶನದ ವೈಶಿಷ್ಟ್ಯವೆಂದರೆ ಕಾಂಗ್ರೆಸ್ ಪಕ್ಷದ ಸಭಾತ್ಯಾಗದೃಶ್ಯಗಳು ಕಡಿಮೆಯಾಗಿದ್ದುದು. ತಮ್ಮ ಪಕ್ಷ ಪ್ರತಿನಿಧಿ ಸಭೆಯಲ್ಲಿ ಒಂದು ಮೂರಾಂಶಕ್ಕಿಂತಲೂ ದೊಡ್ಡದಾಗಿರುವಾಗ ಅದಕ್ಕೆ ಮುಂಗಡ ಪತ್ರಿಕೆಯ ಚರ್ಚೆಯಲ್ಲಿ ಸಾಕಷ್ಟು ಅವಕಾಶ ದೊರಕಿಸಿ ಕೊಡಲಿಲ್ಲೆಂದು ಕಾಂಗ್ರೆಸ್ ಪಕ್ಷದವರು ಅಧ್ಯಕ್ಷರನ್ನು ದೂರಿ ಒಮ್ಮೆ ಸಭಾತ್ಯಾಗ ಮಾಡಿದ್ದರು.

ದಿವಾಣ-ಅಧ್ಯಕ್ಷರು ಬ್ರಿಟಿಶ ಸೂಚನೆಗಳ ಸಂಬಂಧದಲ್ಲಿ ಸಂಸ್ಥಾನಿಕರ ಸಭೆಯ ಬಗ್ಗೆ ಮುಂಬಯಿಗೆ ಹೋದುದರಿಂದ ಪ್ರಜಾಪ್ರತಿನಿಧಿ ಸಭೆಯ ಉತ್ತರಾರ್ಧದಲ್ಲೆಲ್ಲ ಕಂದಾಯಮಂತ್ರಿ ಶ್ರೀ ಪುಲ್ಲಾರೆಡ್ಡಿಯವರಾಗಲಿ ವ್ಯವಸಾಯಮಂತ್ರಿ ಶ್ರೀನಿವಾಸನ್ನರಾಗಲಿ ಅಧ್ಯಕ್ಷತೆ ವಹಿಸಿದ್ದರು.

ಮುಂಗಡ ಪತ್ರಿಕೆಯ ಚರ್ಚೆಯ ಕಾಲಕ್ಕೆ ಮುಂಗಡ ಪತ್ರಿಕೆಯ ವಿಷಯಗಳ ಮತ್ತು ಬೇರೆ ಬೇರೆ ಹಿತಸಂಬಂಧಗಳುಳ್ಳವರು ತಮ್ಮ ತಮ್ಮ ವರ್ಗದ ವಿಷಯ ಸರಕಾರದ ಸಹಾನುಭೂತಿಯನ್ನು ಅಪೇಕ್ಷಿಸಿದ್ದಲ್ಲದೆ ಬೇರೆ ಅನೇಕ ವಿಷಯಗಳು ಪ್ರಸ್ತಾಪಿಸಲ್ಪಟ್ಟವು. ಪ್ರಜೆಗಳಿಗೆ ಅಧಿಕಾರಿಗಳಿಂದ ಹೆಚ್ಚು ಮನ್ನಣೆಗಳನ್ನು ಶ್ರೀ ವಿ ವೆಂಕಟಪ್ಪ ಮೊದಲಾದ ಸದಸ್ಯರು ಬೇಡಿದರು. ಹರಿಜನರಿಗೆ ದೇವಸ್ಥಾನ ಪ್ರವೇಶವನ್ನು ಸಿದ್ದಯ್ಯನವರು ಬೇಡಿದರೆ ಶ್ರೀ ದೇವಯ್ಯನವರು ಹರಿಜನ ಮಂತ್ರಿಗಳೊಬ್ಬರನ್ನು ನೇಮಿಸಿಕೊಳ್ಳಬೇಕೆಂದರು. ಹೊಣೆಗಾರ ಸರಕಾರದ ಅವಶ್ಯಕತೆಯನ್ನೂ ಒತ್ತಿ ಹೇಳಲಾಯಿತು. ಮಂತ್ರಿಮಂಡಲದ ಸಭೆಗಳಲ್ಲಿ ದಿವಾಣರು ಸರ್ವಾಧಿಕಾರಿಯಂತೆ ವರ್ತಿಸುವರೆಂಬ ಆರೋಪವನ್ನು ಮಾಡಲಾಯಿತು. ಅದನ್ನು ಡಾ. ರಾಯನ್ನರು [ಆರೋಗ್ಯಮಂತ್ರಿ] ಒಡನೆ ಅಲ್ಲಗಳೆದರು. ಮೈಸೂರ ಮುಸ್ಲಿಂ ಸಂಸ್ಥಾನವೆಂದು ಸಂಸ್ಥಾನ ಲೀಗಿನವರು ಡಾನ್ ಪತ್ರಿಕೆಯಲ್ಲಿ ಪ್ರಕಟಿಸಿದರೆಂದು ಹೇಳಲಾದ ಮನವಿಯ ಪ್ರಶ್ನೆಯೂ ಸಭೆಯಲ್ಲಿ ಬಂದಿದ್ದು ಶ್ರೀ ಭೂಪಾಲಂ ಅವರು ಆ ಬಗ್ಗೆ ಹಕ್ಕಿನ ಗೊತ್ತುವಳಿಯನ್ನು ಕೂಡ ಕಳಿಸಿದ್ದರು. ಸಭೆಯಲ್ಲಿ ಲೀಗ ಪಕ್ಷದ ನಾಯಕರಾದ ಶ್ರೀ ಖಲೀಲರು ಇದನ್ನು ಅಲ್ಲಗಳೆದು ಸಂಸ್ಥಾನದ ಮುಸ್ಲಿಮರ ರಾಜಭಕ್ತಿಯನ್ನು ಪುನರುಚ್ಚರಿಸಲು ತಪ್ಪಲಿಲ್ಲ. ಕಾಂಗ್ರೆಸ್ ಪಕ್ಷದ ನಾಯಕರಾದ ಹನುಮಂತಯ್ಯನವರು ಮಂತ್ರಿಗಳ ಹೊಣೆಗೇಡಿತನ, ಲಂಚಗುಳಿತನವನ್ನು ಹೋಗಲಾಡಿಸುವಲ್ಲಿ ಅವರ ಅಸಡ್ಡೆಗಳನ್ನು ಟೀಕಿಸಿದರು. ಶ್ರೀ ಎಂ ಎನ್ ಜೋಯಿಸರು (ಕಾಂ.) ಈಗಿನ ಸರಕಾರ ಅಸಮರ್ಥವಿದ್ದು ಹೆಚ್ಚು ಸಮರ್ಥರಾದ ಹೊಣೆಗಾರ ಮಂತ್ರಿಗಳು ಬರಬೇಕೆಂದು ಸರಕಾರವನ್ನು ಟೀಕಿಸಿದರು. ಆಹಾರ ಹಂಚಿಕೆಯಲ್ಲಿಯೂ ಪಕ್ಷಪಾತ ನಡೆದಿದೆಯೆಂದು ಆರೋಪಿಸಿದರು.

### ನಮಗೂ ಬೇಡವಾಗಿಲ್ಲ !

ತಾ. ೬ ಕ್ಕೆ ವಿವಿಧ ಖಾತೆಗಳ ಕಾರ್ಯದರ್ಶಿಗಳು ಮಂತ್ರಿಗಳು ತಮ್ಮ ತಮ್ಮ ಖಾತೆಗಳಿಗೆ ಸಂಬಂಧಿಸಿದ ಟೀಕೆಗಳಿಗೆ ಒಬ್ಬರ ಹಿಂದೊಬ್ಬರು ಉತ್ತರವಿತ್ತರು. ಅವರ ಸಮರ್ಥನೆಗಳಿಗೆ ಉತ್ತರ ಕೊಡಲು ವಿರೋಧಿ ಸದಸ್ಯರಿಗೆ ಎಡೆಯೇ ಇದ್ದಿಲ್ಲ. ಹೊಣೆಗಾರ ಸರಕಾರದ ಸಂಬಂಧದಲ್ಲಿ ಸದಸ್ಯರು ಮಾಡಿದ ಟೀಕೆಗಳಿಗೆ ಡಾ. ರಾಯನ್ನರು ಉತ್ತರ ಕೊಟ್ಟದ್ದು ಮಹತ್ವದ್ದಾಗಿತ್ತು. ಹೊಣೆಗಾರ ಸರಕಾರದ ಸ್ಥಾಪನೆಯನ್ನು ತಾವೇನೂ (ಮಂತ್ರಿಗಳು) ಬೇಡವೆನ್ನುವದಿಲ್ಲ. "ಶ್ರೀಮನ್ಮಹಾರಾಜರು ಅಜ್ಞಾಪಿಸಿದರೆ ಈ ಸ್ಥಳಗಳನ್ನು ನಿಮಗಾಗಿ ಬಿಟ್ಟುಕೊಡುವೆವು," ಎಂದರವರು. ಅಲ್ಲಿಯ ವರೆಗೆ ಮಹಾರಾಜರ ಅಪ್ಪಣೆ ಮೇರೆಗೆ ನಮ್ಮ ಮನಸ್ಸಾಕ್ಷಿಗನುಸಾರವಾಗಿ ಜನಸೇವೆ ಮಾಡುವೆವು ಎಂದು ಅವರು ನುಡಿದರು. ಹೊಣೆಗಾರ ಸರಕಾರದ ಬೇಡಿಕೆಯೊಡನೆ ಎಲ್ಲ ಭಾಷಣಗಳನ್ನು ಮುಗಿಸುವ ಕಾಂಗ್ರೆಸ್ಸಿಗರಿಗೆ ಮಾರೇಟು ಕೊಟ್ಟು ಅವರು ಕಾಂಗ್ರೆಸ್ ಬಹುಮತವಿರುವ ಲೋಕಲ ಬೋರ್ಡ ಮತ್ತು ನಗರಸಭೆಗಳ ಕಡೆಗೆ ಮುಖ್ಯವಾಗಿ ಬೆಂಗಳೂರು ನಗರಸಭೆಯತ್ತ, ಬೊಟ್ಟುಮಾಡಿ ಅವು ಬೇಡವೆಂದು ಜನರೇ ಹೇಳುವಂತಾಗಿದೆಯೆಂದರು. ಪುಲ್ಲಾರೆಡ್ಡಿಯವರು ಲಂಚ ನಿರೋಧನದ ಸಂಬಂಧದಲ್ಲಿ ಮಾತಾಡಿ ರೇಲ್ವೆ ಖಾತೆಯಲ್ಲಿ ಕಳೆದ ೬ ತಿಂಗಳಲ್ಲಿ ೭ ಜನ ಉಚ್ಚ ಅಧಿಕಾರಿಗಳನ್ನು ಕಿತ್ತು ಹಾಕಿದ್ದಲ್ಲದೆ ೪೧ ಜನರನ್ನು ಕೆಳದರ್ಜೆಗೆ ತಳ್ಳಿದ್ದನ್ನು ಉಲ್ಲೇಖಿಸಿದರು.

### ಆಹಾರ ಚರ್ಚೆ

ಕೊನೆಯ ದಿನ ಆಹಾರ ಚರ್ಚೆ ನಡೆಯಿತು. ಸಾಮಾನ್ಯ ರೂಢಿಗೆ ವಿರುದ್ಧವಾಗಿ ಕಾಂಗ್ರೆಸ್ ಪಕ್ಷದ ಶ್ರೀ ವೆಂಕಟರಂಗಪ್ಪನವರು ಚರ್ಚೆಯನ್ನು ಪ್ರಾರಂಭಿಸಿದರು. ಆಹಾರ ಖಾತೆಯ ಅದೂರ ದೃಷ್ಟಿ ಮತ್ತು ಅಸಾಮರ್ಥ್ಯಗಳು ಅವರ ಟೀಕೆಗೆ ಗುರಿಯಾದವು. ಶ್ರೀ ಮರುಳಪ್ಪ, ಶಂಕರಲಿಂಗೇಗೌಡ, ಭೂಪಾಲಂ, ಮೊದಲಾದವರು ಸರಕಾರದ ಆಹಾರ ಸಂಗ್ರಹ, ವಿತರಣಗಳಲ್ಲಿರುವ ದೋಷಗಳನ್ನೆತ್ತಿ ತೋರಿಸಿ ಕೆಲ ಸೂಚನೆಗಳನ್ನು ಮಾಡಿದರು. ಯುರೋಪಿಯನ್ ಸದಸ್ಯ ಮಿಡ್ಲಟನ್ನರು ಕನ್ನಡದಲ್ಲಿ ಭಾಷಣಮಾಡಿ ಸರಕಾರದ ಕಾರ್ಯದಲ್ಲಿರುವ ದೋಷಗಳನ್ನು ತೋರಿಸಿಕೊಟ್ಟದ್ದೊಂದು ವೈಶಿಷ್ಟ್ಯವಾಗಿತ್ತು. ಆಹಾರ ನಿರ್ದೇಶಕರು ಸರಕಾರದ ಪರವಾಗಿ ಉತ್ತರವಿತ್ತರು.

### ಇತರ ಕಾರ್ಯಕಲಾಪಗಳು

ಅಧಿವೇಶನ ಕಾಲಕ್ಕೆ ಅನೇಕಾನೇಕ ಗೊತ್ತುವಳಿ, ನಿಲುವಳಿ, ಅರಿಕೆಗಳು ಮಂಡಿಸಲ್ಪಟ್ಟಿದ್ದವು. ಅವುಗಳಲ್ಲಿ ಹೆಚ್ಚಿನವುಗಳನ್ನು ಅಧ್ಯಕ್ಷರು ತಳ್ಳಿಹಾಕುವದು ಪರಂಪರೆಯೇ ಆಗಿಬಿಟ್ಟಿದೆ. ಮುಂಗಡ ಪತ್ರಿಕೆಯ ಸಂಬಂಧದಲ್ಲಿ ಬಂದ ನಿರ್ಣಯಗಳಲ್ಲಿ ಸರಕಾರದ ಇಚ್ಛೆಗೆ ವಿರುದ್ಧವಾಗಿ ಅಂಗೀಕೃತವಾದ ಗೊತ್ತುವಳಿಗಳಲ್ಲಿ ಶ್ರೀಮತಿ ಹನುಮಕ್ಕನವರ ಚಿತ್ರದುರ್ಗ ಗ್ರಾಮಾಂತರಗಳಲ್ಲೂ ನಗರಗಳಲ್ಲಿನಂತೆ ಸೀದಾ ಪದ್ಧತಿಯಿಂದ ಆಹಾರ ಒದಗಿಸಬೇಕೆಂಬ ಗೊತ್ತುವಳಿಯನ್ನು ಉಲ್ಲೇಖಿಸಬಹುದು. ಪ್ರತಿಯೊಂದು ತಾಲೂಕಿಗೊಂದು ಹಾಯಸ್ಕೂಲ ಬೇಕು ಎಂಬ ಶ್ರೀ ಸುಬ್ಬಯ್ಯನವರ ನಿರ್ಣಯ ಅವಿರೋಧವಾಗಿ ಸ್ವೀಕೃತವಾಯಿತು. ನಗರ ಸಭೆ, ಲೋಕಲ್ ಬೋರ್ಡುಗಳಿಗೂ ಪ್ರ. ಪ್ರ. ಸಭೆಗೆ ನಡೆಸಿದಂತೆ ಅಲ್ಪಸಂಖ್ಯಾಕರಿಗೂ ಪ್ರಾತಿನಿಧ್ಯ ದೊರಕುವಂತೆ ಕ್ಯುಮುಲೇಟಿವ ಮತಪದ್ಧತಿಯನ್ನು ತರಬೇಕೆಂಬ ಎಚ್. ಬಿ. ಚಿಕ್ಕೇಅರಸಿನವರ ಗೊತ್ತುವಳಿಗೆ ಕಾಂಗ್ರೆಸ್ ಮೊದಲಾದ ಪಕ್ಷಗಳ ವಿರೋಧವೊದಗಿ ಬಿದ್ದುಹೋಯಿತು. ಪ್ರಜಾಪ್ರತಿನಿಧಿ ಸಭೆಯ ಇನ್ನೊಂದು ಅಧಿವೇಶನ ಜರುಗಿಸಬೇಕೆಂಬ ಗೊತ್ತುವಳಿಗೂ ಅಂಗೀಕಾರ ದೊರೆಯಿತು.

ಪ್ರಶ್ನೋತ್ತರ ಕಾಲದಲ್ಲಿ ಹೊರಬಿದ್ದ ಅನೇಕ ವಿಷಯಗಳಲ್ಲಿ ಕಡೂರ ಚಿಕ್ಕಮಗಳೂರು ಭಾಗಕ್ಕೆ ರೇಲ್ವೆ ಹಾಕುವ ಯೋಜನೆ ಸಿದ್ಧವಾಗಿದ್ದು ಅದನ್ನು ೧೯೪೭ ರಲ್ಲಿ ನಿಶ್ಚಿತವಾಗಿ ಪ್ರಾರಂಭಿಸಲಾಗುವದೆಂಬ ಆಶ್ವಾಸನೆಯನ್ನು ಸರಕಾರದವರು ಕೊಟ್ಟಿದ್ದನ್ನು ಉಲ್ಲೇಖಿಸಬಹುದು.




### ಮುಂಬಯಿ ಶೇರ ಪೇಟೆ

ಕಳೆದ ವಾರದಲ್ಲಿ ವ್ಯಾಪಾರಸ್ಥರು ಪಾಲುಗಳನ್ನು ಭರದಿಂದ ಮಾರಿ ದರಗಳು ಇಳಿದುದರಿಂದ ಪೇಟೆಯ ಪರಿಸ್ಥಿತಿ ತುಸು ಸುಧಾರಿಸಿತು. ಸೋಮವಾರ ) ತಾ. ೧೦) ಟಾಟಾ ಪಾಲುಗಳು ೩೧೦೨-೦-೦ ರಿಂದ ಪ್ರಾರಂಭವಾಗಿ ೩೧೧೭-೮-೦ ರ ವರೆಗೂ ಹೋಯಿತು. ಆದರೂ ಇಂದು ಮತ್ತೆ ಒಂದೇಟು ತಿಂದು ೩೧೦೭-೮-೦ ಕ್ಕಿಳಿಯಿತು. ಒಟ್ಟಿನಮೇಲೆ ವ್ಯಾಪಾರಸ್ಥರಲ್ಲಿ ಒಂದು ಬಗೆಯ ಜಾಗರೂಕ ಪ್ರವೃತ್ತಿಯುಂಟಾಗಿದೆ. ಪಾಲುಗಳ ಮೇಲೆ ಸಾಲ ಕೊಡುವ ಸಂಬಂಧದಲ್ಲಿ ಬ್ಯಾಂಕುಗಳ ಮೇಲೆ ಕೆಲ ನಿರ್ಬಂಧಗಳನ್ನು ಸರಕಾರ ಹೇರಬಹುದೆಂಬ ಶಂಕೆಯೂ ಹೊಸ ರಾಷ್ಟ್ರೀಯ ಸರಕಾರದ ನಿರೀಕ್ಷೆಯೂ ಇದಕ್ಕೆ ಕಾರಣ ವಾಗಿದ್ದೀತು. ಮುಂಬಯಿ ಡಾಯಿಂಗ ಮತ್ತು ಇತರ ಪಾಲುಗಳಾದರೂ ಇದೇ ಪ್ರವೃತ್ತಿ ತೋರಿದವು. ಸೋಮವಾರ ರೂ. ೨೬೧೦-೦-೦ ರಲ್ಲಿ ಮುಗಿದಿದ್ದ ಡಾಯಿಂಗು ಬುಧವಾರ ೨೫೮೨-೮-೦ ಕ್ಕೆ ಕಳೆದ ವಾರದ ವರದಿಯ ಕಾಲದ ಮಟ್ಟಕ್ಕೇ ಇಳಿದವು. ಕೋಹಿನೂರು ೯೭೨-೦-೦ ರಿಂದ ೯೬೩—೦—೦ ಕ್ಕೆ ಸ್ವದೇಶೀ ೮೪೭—೦—೦ ರಿಂದ ೮೪೧-೦-೦ ಕ್ಕೆ ಗೋಕಾಕ ೪೦೩—೦—೦ ರಿಂದ ೩೯೬—೦—೦ ಕ್ಕೆ ಬೇಲಾಪುರ ೩೪೨—೦—೦ ರಿಂದ ೩೨೬—೦—೦ ಕ್ಕೆ ಇಳಿದವು. ಸಿಂಧ ಸ್ಟೀಮಕ್ಕೆ ಬೆಂಬಲ ದೊರೆತು ೫೪—೧೨—೦ ರ ವರೆಗೂ ಹೋದರೂ ೫೩-೮-೦ ಕ್ಕಿಳಿಯಿತು. ಅಸೋಸಿಯೇಟೆಡ ಸಿಮೆಂಟ್ಸ ಮಾತ್ರ ೨೬೦-೦-೦ ರ ಸುತ್ತ ಸ್ವಲ್ಪ ಸ್ಥಿರವಾಗಿಯೆ ಇದೆ.

ಬ್ಯಾಂಕ ಪಾಲುಗಳು ಮಾತ್ರ ಈ ಬಗೆಯಾಗಿ ತಗ್ಗಲಿಲ್ಲ. ಸೆಂಟ್ರಲ ಬ್ಯಾಂಕ ೧೪೫....೮....೦ ಕ್ಕೇರಿದರೆ, ಇಂಪೀರಿಯಲ ಎಫ್ ಸಿ ೨೯೮೦:೦-೦ ರಿಂದ ೩೦೩೦-೦-೦ ಕ್ಕೂ ರಿಜರ್ವ ೧೬೯-೦-೦ ರಿಂದ ೧೭೦-೦-೦ ಏರಿದವು.

ಸರಕಾರಿ ಸಾಲಪತ್ರಗಳಲ್ಲಿ ಜಿ. ಪಿ. ನೋಟುಗಳು ೧೦೩-೯-೬ ರಿಂದ ೧೦೪-೦-೦ ಕ್ಕೆ ಏರಿತು. ೩॥ ಸಾಲಪತ್ರ ೧೦೩-೮-೦ ಕ್ಕೇರಿತು.

### ಚಿನ್ನ-ಬೆಳ್ಳಿ

ಚಿನಿವಾರ ಕಟ್ಟೆಯ ಸ್ಥಿತಿ ಕಳೆದ ವಾರದಂತೆ ಇಳಿಮುಖದಲ್ಲಿಯೆ ಇದೆ. ಬೆಳ್ಳಿಯ ಪ್ರಸ್ಥ ಬಹಳ ಇಳಿದಿದೆ. ತಯಾರಿ ಬೆಳ್ಳಿ ೧೭೪-೦-೦ ರೂಪಾಯಿಗೆ ಬಂದಿದ್ದು ತಯಾರಿ ಚಿನ್ನ ಮಾತ್ರ ಅಷ್ಟು ಕಳೆದುಕೊಳ್ಳದೆ ೧೯೫-೦-೦ ರ ಸುತ್ತು ಇದೆ.

### ಅರಳಿ

ಅರಳಿ ಪೇಟಿ ಈ ವಾರದಲ್ಲಿ ತುಸು ಸುಧಾರಣೆಯನ್ನು ತೋರಿತು. ಜುಲೈ ವಾಯಿದೆ ಇಂದು ೪೪೩-೦-೦ ಕ್ಕೆ ಮುಟ್ಟಿತು. ಸಪ್ಟೆಂಬರ ೪೫೩-೪-೦ ಹೊಸಸೀಕಿನ ವಾಯದೆ ವ್ಯಾಪಾರವನ್ನು ಪ್ರತಿಬಂಧಿಸಲಾಗಿದೆ.

### ಎಣ್ಣೆಕಾಳು

| | | |
|---|---|---|
| ಶೇಂಗಾ | ರೂ. | ೧೩೦—೦—೦ |
| ಅಗಸಿ | ,, | ೨೬-೧೦—೦ |
| ಅಗಸಿ ಎಣ್ಣೆ | | ೧೨-೪-೦ |

### ಸಾಂಗಲಿ ಪೇಟೆ

| | | |
|---|---|---|
| ಬೆಲ್ಲ ಬಂಗಾಲಿ ಮಣ | ರೂ. | ೧೪—೧೬ |
| ಅರಿಸಿಣ ಹೇರು | ,, | ೮೦—೯೨ |
| ಮೆಣಸಿನಕಾಯಿ ಹೇರು | ,, | ೧೮೦—೨೦೦ |
| ಶೇಂಗಾ (ಖಂಡಿ) | ,, | ೧೦೫ |
| ದೇಶಿ ತಂಬಾಕು ಹೇರು | | ೧೨೫-೨೫೦ |
| ಪಂಢರಪುರಿ | " | ೨೦೦—೩೦೦ |
| ತಂಬಾಕು ಅಕೋಳ (ಹೇರು) | | ೨೫೦—೪೦೦ |

### ಶಿವಮೊಗ್ಗೆ

| | | |
|---|---|---|
| ದೇಶಾವರ ಅಡಿಕೆ ನಂ. ೧ (ಮಣ) | ರೂ. | ೨೫-೨೬ |
| ,, ,, ೨ ,, | | ೨೩-೨೪ |
| ,, ,, ೩ ,, | | ೨೧-೨೨ |
| ರಾಜಾ ಅಲವು | " | ೨೨-೨೪ |
| ಬೆಟ್ಟೆ | " | ೧೩-೧೪ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೯೦ |
| ,, | ನಂ. ೨ | ೨೮೦ |
| ,, | ನಂ. ೩ | ೨೭೦ |
| ಅಪಲಂಡ ಹತ್ತಿ | | ೨೬೦-೨೮೫ |
| ಜಿನ | | ೨೧೦-೨೧೨ |
| ಸಾಜಿನ | | ೨೦೫-೨೧೦ |
| . ಡಬಲರೋಲರ | | ೨೦೦-೨೧[illegible] |

## ಬೆಂಗಳೂರು-

ಮೈಸೂರ ನ್ಯಾಯ ವಿಧಾಯಕ ಸಭೆಯ ಆಯವ್ಯಯ ಅಧಿವೇಶನ ಜೂನ ೨೦ ಕ್ಕೆ ಪ್ರಾರಂಭವಾಗುವದು. ಸಂಸ್ಥಾನದ ಆಡಳಿತೆಯನ್ನು ಬ್ರಿಟಿಶ ಪ್ರಾಂತಗಳಲ್ಲಿಯ ಮಟ್ಟಕ್ಕೆ ತರಬೇಕು, ೧೯೪೨ ಅಂದೋಲನದ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಬೇಕು. ಸರಕಾರದ ಅಧೀನದಲ್ಲಿರುವ ದೇವಸ್ಥಾನಗಳನ್ನು ಹರಿಜನರಿಗೆ ತೆರೆದು ಹಾಕಬೇಕು ಇತ್ಯಾದಿ ಗೊತ್ತುವಳಿಗಳು ಅಧಿವೇಶನದ ಮುಂದೆ ಬರುವವೆಂದು ತಿಳಿದು ಬಂದಿದೆ.

ಮೈಸೂರು ಸರಕಾರದ ವ್ಯವಸಾಯಖಾತೆಯ ಸಚಿವರಾದ ಶ್ರೀ. ಎಂ. ಎ. ಶ್ರೀನಿವಾಸನ್ನರು ಬೇಗನೆ ಅಧಿಕಾರ ನಿವೃತ್ತರಾಗುವರೆಂದು ತಿಳಿಯುತ್ತದೆ. ಅವರ ಸ್ಥಳಕ್ಕೆ ಯಾರು ಸಚಿವರಾಗುವರೆಂಬುದು ತಿಳಿಯುವದಿಲ್ಲ. ಈ ಬಗ್ಗೆ ಬಗೆಬಗೆಯ ಊಹಾಪೋಹ ನಡೆದಿವೆ.

ಪ್ರಸಿದ್ಧ ಬ್ರಿಟಿಶ ಗ್ರಂಥಕಾರರಾದ ಮಿ. ಎಚ್ ಎಸ್ ಬ್ರೆಲ್ಸಫೋರ್ಡರು ಈಗ ಬೆಂಗಳೂರಿಗೆ ಬಂದಿದ್ದು ಅವರು ಸಂಸ್ಥಾನದ ಬರಗಾಲ ಪ್ರದೇಶಗಳಿಗೆ ಭೆಟ್ಟಿಕೊಡುವವರಿದ್ದಾರೆ. ಅವರು ಒಂದು ಪತ್ರಿಕಾ ಸಂದರ್ಶನವಲ್ಲಿ ಸಮಪ್ರಾತಿನಿಧ್ಯಕ್ಕೆ ವಿರೋಧ ವ್ಯಕ್ತಗೊಳಿಸಿದರು. ಆದರೂ ಬ್ರಿಟಿಶ ಯೋಜನೆಯನ್ನು ಅಂಗೀಕರಿಸಬೇಕೆಂದೂ ಕಾಲಾಂತರದಲ್ಲಿ ಜಾತೀಯ ವೈಷಮ್ಯ ದೂರವಾಗಿಯೆ ತೀರುವದೆಂದೂ ಅವರು ಆಶಿಸಿದರು.

ಶಿವಸಮುದ್ರ ಜಲಾಶಯದಲ್ಲಿ ನೀರು ಕಡಿಮೆಯಾದುದರಿಂದ ಬೆಂಗಳೂರಲ್ಲಿ ವಿದ್ಯುಚ್ಛಕ್ತಿಯ ಪೂರೈಕೆಯನ್ನು ೧೦೦ ಕ್ಕೆ ೬೬ ರಷ್ಟು ಕಡಿಮೆ ಲಾಗುವದೆಂಬ ಸರಕಾರಿ ಆಜ್ಞೆಯಿಂದ ಬೆಂಗಳೂರಲ್ಲಿ ಕಠಿಣ ಪರಿಸ್ಥಿತಿಯುಂಟಾಗಿದೆ. ಬೇಗನೆ ಮಳೆಯಾಗಿ ನೀರು ಬರದಿದ್ದರೆ ಬೆಂಗಳೂರಿದ ಔದ್ಯೋಗಿಕ ಉಪಕ್ರಮಗಳಿಗೆ ಧಕ್ಕೆ ತಟ್ಟದಿರದು. ಈ ಸಂಬಂಧದಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಒಂದು ನಿಲುವಳಿ ಬಂದಿತ್ತು. ಅದಕ್ಕೆ ಅಪ್ಪಣೆ ದೊರೆಯಲಿಲ್ಲ.

ಚಿಕ್ಕ ಜಾಜೂರು ಬಳಿ ತಾ ೪. ರಾತ್ರಿ ಉಗಿಬಂಡಿ ಹಳಿಬಿಟ್ಟು ಸರಿದುದರಿಂದ ಅಪಘಾತ ಸಂಭವಿಸಿ ೨೩ ಜನರಿಗೆ ಗಾಯಗಳಾಗಿವೆ. ೧೦ ಜನರನ್ನು ಅಸ್ಪತ್ರೆಗೆ ಹಾಕಲಾಗಿದೆ.

ದಿವಂಗತ ಕೌಜಲಗಿ ಹಣಮಂತರಾಯರ ಪುಣ್ಯತಿಥಿಯು ಮುಧೋಳದಲ್ಲಿ ಸಾಯಂಫೇರಿ, ಸಭೆ ಮೊದಲಾದ ಕಾರ್ಯಕ್ರಮಗಳಿಂದ ಸಾಂಗವಾಗಿ ಅವರ ಸ್ಮಾರಕ ವಾಚನಾಲಯ ಸ್ಥಾಪಿಸುವದು ಗೊತ್ತಾಯಿತು.

ನಮ್ಮ ಬೆಂಗಳೂರು ಏಜಂಟರು
ದಿ ಭಾರತ ಏಜನ್ಸೀಜ
ಚಿಕ್ಕಪೇಟೆ- ಬೆಂಗಳೂರು

# ಚೈತ್ರ ಮಾಸದ ಕತೆಗಳು

— ಬೆಳಗಾವಿ ಕಲಾಮಂಟಪದಿಂದ —

ಈ ಸಾರೆ ನಮ್ಮ ಮಾಸಿಕ ಮತ್ತು ವಾರಪತ್ರಗಳಲ್ಲಿ ಕೂಡಿ ಸುಮಾರು ೪೫ ಕತೆಗಳು ಬಂದಿವೆ. ಕರ್ನಾಟಕದ ಎರಡು ಕೋಟಿ ಜನರಿಗೆ ಇಷ್ಟು ಕತೆಗಳು ಸಾಲಬಹುದೇ ? ಸಾಹಿತ್ಯರಸದೂಟವನ್ನು ಮಾಡಿಸಬಹುದೇ ? ನಮ್ಮಲ್ಲಿ ಸಾಹಿತ್ಯವು ಸಾಕಷ್ಟು ಬೆಳೆದಿಲ್ಲವೆಂಬ ಮಾತಿಗೂ, ಜನರು ಸಹ ತಮ್ಮ ನಿತ್ಯ ವ್ಯವಹಾರದಿಂದ ಸಾಹಿತ್ಯ ಪ್ರಪಂಚದ ರಸಾಸ್ವಾದಕ್ಕೆ ಬಲವಿಲ್ಲದವರೆಂಬ ಹೇಳುವ ಮಾತಿಗೂ ಈ ನಮ್ಮ ಪ್ರಗತಿ ಉತ್ತರವಾಗಿ ನಿಂತರೆ ಹೆಚ್ಚೇನು! ಇದಕ್ಕೂ ಹೆಚ್ಚು ಕತೆಗಳು ಬೇಕೆಂಬ ಮಾತೂ, ಜನರು ಬಯಸಬೇಕೆಂಬ ಮಾತೂ ಒಂದು ಕಡೆಗಿರಲಿ.

ಈ ೪೫ ಕತೆಗಳಲ್ಲಿ ತಾಯಿ, ಗುಟ್ಟು-ರಟ್ಟು, ಭಾವನಾ ಪ್ರಪಂಚ, ಕಲ್ಲಿನ ಕರುಣೆ, ಅವಳ ತಮ್ಮ, ನಿಷ್ಫಲ ಪರೀಕ್ಷೆ, ಕಿಷ್ಕಿಂಧೆಯಲ್ಲಿ ಕೋತಿ, ಕೊನೆಗೆ (ಆಧಾರದಿಂದ) ಜಾನಿಯಕತೆ ಎಂಬ ಏಳು ಕತೆಗಳು ಅನುವಾದಿಸಿಕೊಂಡು ಬಂದಿವೆ. ಈ ಅನುವಾದ ಕತೆಗಳ ರೀತಿ, ನೀತಿ, ನಿರೂಪಣೆ, ನಾವೀನ್ಯ, ನಿಯಮಗಳನ್ನು ಮಾಡುವದು ಪ್ರಕೃತ ವಿಷಯ. ಕನ್ನಡಿಗರಿಂದ, ಕನ್ನಡ ಪ್ರಪಂಚದಿಂದ ಆಯ್ದುಕೊಂಡ ಕತೆಗಳನ್ನು ಬರೆದು, ಆರೆದು ನೋಡುವದು ನಮ್ಮ ಕೆಲಸ. ಈ ಕೆಲಸವನ್ನು ಆ ಏಳು ಕತೆಗಳ ಕಣ್ಣಿಂದ ಅಳೆಯುವದು ಒಂದು ಸುಲಭ ಮಾರ್ಗ.

## ಅನುವಾದ ಕತೆಗಳು

ತಾಯಿ ಕತೆಯಲ್ಲಿ ಆಲೆಕ್ಸಾಂಡ್ರಳು ಒಂದು ಧೀರೋದಾತ್ತ ಮಣಿ. ಸ್ತ್ರೀತನದ ಪರಿಸೀಮೆಯ ಮೇಲೆ, ದೇಶವಾತ್ಸಲ್ಯದ ರತ್ನಸಿಂಹಾಸನದ ಮೇಲೆ ತಾರೆಯಂತೆ ಮಿನುಗುವ ರತ್ನ. ಕತೆಯ ಉದ್ದಕ್ಕೂ ಮಿಂಚಿನಂತೆ ಸುಳಿದಾಡುವಳು. ಗುಟ್ಟು ರಟ್ಟಿನಲ್ಲಿ ಸ್ತ್ರೀಜೀವನದ ಒಂದು ಸೂಕ್ಷ್ಮ ಸಂಗತಿಯು ಎಷ್ಟು ಸ್ಫುಟವಾಗಿ, ಎಷ್ಟು ಶುಭ್ರಮಯವಾಗಿ ಪೂರ್ಣ ಪೂರ್ಣಗೊಂಡಿದೆ! ಭಾವನಾ ಪ್ರಪಂಚದಲ್ಲಿ ಒಂದು ಅವ್ಯಕ್ತ ಭಾವನೆಯು ಮೂರ್ತಿಗೊಂಡು ಸೆರೆಗುಡಕನ ಮದಾವಸ್ಥೆಯಲ್ಲಿ ತನ್ನ ಹಸಿವೆಯನ್ನು ಹಿಂಗಿಸಿಕೊಳ್ಳುವದು ? ಅವಳ ತಮ್ಮ ಕತೆಯಲ್ಲಿ ಮುದುಕಿಯ ಹಿರಿಯಾಸೆಯನ್ನು ತೃಪ್ತಿಪಡಿಸಿದ ಒಬ್ಬ ಪರಿಚಿತನ ಮಾನವ್ಯತೆಯು ಸಾಮಾನ್ಯವಾದುದೇ? ನಿಷ್ಫಲ ಪರೀಕ್ಷೆಯಲ್ಲಿ ಆ ಮುದುಕಿಯು ದೇಹಧರ್ಮಕ್ಕೂ ಪಡುವ ಸೂಕ್ಷ್ಮ ದುರಂತ ಸನ್ನಿವೇಶವು ಭಯಾನಕವಾದುದು ! ಕಲ್ಲಿನ ಕರುಣೆಯಲ್ಲಿ ಕರುಣಾರಸ ಪ್ರಧಾನಿಗಳಿಗೆ ಹಾಕಿದ ಸವಾಲು ........! ಇತ್ಯಾದಿ....ಎಂಥ ಸಿದ್ಧ ಸತ್ಯಸಂಗತಿಗಳು. ದಿನಗಳು ಎಷ್ಟೇ ಉರುಳಿ ಹೋಗಲಿ, ಕಾಲವು ಎಂಥದೇ ಬರಲಿ, ಆ ಸತ್ಯಕ್ಕೆ—ಆ ಜೀವನ ನಿರ್ಣಯಕ್ಕೆ ಆ ಸೂಕ್ಷ್ಮ ಸಂಗತಿಗಳ ಪರಾಕಾಷ್ಠತೆಗೆ ಮಾನವ ಪ್ರಾಣಿಯೇ ಉದಾಹರಣೆಯಾಗಿ ನಿಲ್ಲಬೇಕು! ಈ ಅಳತೆಗೋಲಿನಿಂದ ನಮ್ಮ ಈ ಕತೆಗಳನ್ನು ಅಳೆಯಬೇಕಾದರೆ ಕೈಕೋಲು ಕಳಚಿಬೀಳದಂತೆ ಜಾಗರೂಕತೆಯನ್ನು ತಾಳಬೇಕು. ಇರಲಿ

## ಲಗ್ನ--ವಿಘ್ನ ಕತೆಗಳು

ಗಂಡು—ಹೆಣ್ಣಿನ ಜೀವನದಲ್ಲಿ ಮದುವೆ ಒಂದು ಮುಖ್ಯ ಘಟಕ. ಇದು ಇಂದೂ-ಹಿಂದೂ-ಮುಂದೂ ಎಂದೂ ಒಪ್ಪುವ ವಿಷಯ. ಪ್ರೇಮ, ಮದುವೆಯ ಪ್ರಾಣವೆನ್ನಬಹುದು. ಮದುವೆಯಾದ ಮೇಲೆ ಮಾನವನ ವ್ಯಕ್ತಿತ್ವದ ಅರಿವು. ಆ ಅರಿವಿನಲ್ಲಿ ಅವನು ಏಳಬಹುದು, ಬೀಳಬಹುದು. ಅದಕ್ಕೆ ಉತ್ತರ ಆಯುಸ್ಸು ಹೊಣೆಯಾಗಿ ನಿಲ್ಲುವದು. ಆದರೆ ಸಣ್ಣ ಕತೆಯಲ್ಲಿ ಇದಕ್ಕೆ ವಿಶೇಷ ಬೆಲೆಯಿಲ್ಲ. ಸಣ್ಣಕತೆಯ ಸಣ್ಣ ಜೀವನದಲ್ಲಿ ಅದು ಮನೋಧರ್ಮಕ್ಕನುಗುಣವಾಗಿ ಸೂಕ್ಷ್ಮವಾಗಿ ಬೆಳೆದು ಬರುವದು. ಒಂದು ಉನ್ನತ ಶಿಖರಕ್ಕೇರಿನಿಂತು ಮಿನುಗುವದು, ಪೂರ್ಣತೆಯನ್ನು ತಂದೆನೆಂದು ಕವಿಯು ದಾಷ್ಟ್ಯದಿಂದ ಹೇಳುವರು ಒಂದು ಸಾಹಸದ ಸಂಗತಿಯಂದೇ ಹಾಗೆ ನಾವು ಹೇಳುವೆವು. ಅಲ್ಲದೆ ಸಣ್ಣ ಕತೆಗೆ ಮದುವೆಯ ವಿಷಯವನ್ನು ಆರಿಸಿಕೊಳ್ಳುವದು ಹಳೆಯ ಸಂಗತಿಯು. ತರುಣ ಸಾಹಿತಿಗಳ ಆರಂಭಾವಸ್ಥೆಯಲ್ಲಿ ಇಂಥ ಸಂಗತಿಗಳೇ ಹೆಚ್ಚು.

ಈ ಸಾರೆಯ ಕತೆಗಳಲ್ಲಿ ಸುಮಾರು ಅರ್ಧದಷ್ಟು ಕತೆಗಳು ಲಗ್ನಕ್ಕೆ ಸಂಬಂಧಿಸಿದವುಗಳುಂಟು ಅವುಗಳ ಸಾರವನ್ನು ಗಂಡು—ಹೆಣ್ಣು, ದರ್ಶನ, ಪ್ರೇಮಾಂಕುರ, ಒಂದಷ್ಟು ವಿಘ್ನ, ಕೊನೆಗೆ ಲಗ್ನ ಇಲ್ಲವೆ ಭಗ್ನ-ಎಂದು ಹೇಳಬಹುದು. 'ಆದರೂ ವಾಗ್ದೇವಿಯ ಅನುಗ್ರಹದ ಸಂಗತಿಯಲ್ಲಿ ನಾವೀನ್ಯವಿದೆ. ಟೊಪ್ಪಿಯ ಬೆಲೆಯಲ್ಲಿ ಕನ್ನಡ ತರುಣಿಯ ಸಾಹಸವು ಮೆಚ್ಚುವಂತಹದು. ನಿರ್ಜೀವ ಕುಸುಮದಲ್ಲಿಯ ಶಶಿ-ಶೋಭಾ ಇವರ ಪ್ರಸಂಗ ದುರಂತವಾದುದು. ಒಡೆದ ಕನಸಿನಲ್ಲಿಯ ಸುಧಾನ ಪಾತ್ರ ದಿವ್ಯವಾದುದು. ಆದರೆ ಗಂಡಸಿನ ಮನಸು, ತವರೂರಿಗೆ ಹೋದಾಗ, ಭಿಕ್ಷುಕಿ, ಮದುವೆಯ ಮುನ್ನ ಇವು ಬೇರೆ ಬೇರೆ ಕಂಡರೂ ಕತೆಗೆ ಪುರುಷರ ಸ್ವಚ್ಛಂದ ವೃತ್ತಿಯೊಂದೇ ವಸ್ತುವಿದೆ. ಒಂದೇ ಗುರಿಯದೆ. ಉಳಿದ ಇಬ್ಬರೂ ಒಂದೇ, ಸೆರಗಿನಲ್ಲಿ, ಪರಿವರ್ತನೆ(ವಿಕಟ್ಯ ವಿನೋದಿನಿ,) ಮೋಹ ಮುಗಿಯಿತು. ಅಕ್ಕ ತಂಗಿ, ಆ ಸಂಜೆಗೆ ಹೂ,ದೀನ ದಯಾಳು, ಕಣ್ಣಿನ ಮೋಸಗಳಲ್ಲಿ ಕವಿಯ ಪ್ರತಿಭೆ ಇನ್ನಷ್ಟು ಬೇಕೆನಿಸುವದು. ವಸ್ತುವಿನಲ್ಲಿ ವೀನ್ಯದ ಕೊರತೆ ಎನಿಸುವದು.

## ರೂಪಕ ಕತೆಗಳು

ಇಂಥದೊಂದು ಬುದ್ಧಿಯ ಮಾತನ್ನು ಹೇಳಲು ಕತೆಯನ್ನು ಸಹಾಯಕ್ಕಾಗಿ ತೆಗೆದುಕೊಳ್ಳುವದು ಅದರ ಮಹತಿಯನ್ನು ಕಡಿಮೆ ಮಾಡಿದಂತೆ. ಇದರಿಂದ ಕತೆಯಲ್ಲಿ ಬುದ್ಧಿಯ ಮಾತು ಬರಬಾರದಂತಲ್ಲ. ಅದು ಪರ್ಯಾಯದಿಂದ ತಿಳಿಯಾದ ವಿಷಯವಾಗಿ ಹರಿಯಬೇಕು. ಇಲ್ಲಿ ಮೇಲಧಿಕಾರಿಗಳು ಗುಮಾಸ್ತರನ್ನು ಕತ್ತೆಯಂತೆ ನಡೆಸಿಕೊಳ್ಳಬಾರದು ಎಂಬುದಕ್ಕೆ ನಮ್ಮ ಸಂಘ, ಕದಿಯುವ ಇಚ್ಛೆ ಮಾಡಬೇಡ ನೀನೇ ಕಳೆದು ಕೊಳ್ಳುವಿ ಎಂಬುದಕ್ಕೆ ಅಂದಿನ ಲಾಭ ದಾನಧರ್ಮ ಮಾಡದೆ ಹಣ ಕೂಡಿ ಹಾಕಿದರೆ ಅದು ನ ದೇವಾಯ ನ ಧರ್ಮಾಯ, ದುರಾಚಾರದಿಂದಾದರು ಕೀರ್ತಿಯನ್ನು ಪಡೆಯಬೇಕೆಂದು ಆಶಿಸಿದರೆ ಫಣಿಯಪ್ಪನ ಪರಾಭವ, ಒಬ್ಬ ಸಾಧ್ವಿಯನ್ನು ಮೋಸ ಮಾಡಹೋದರೆ ತನಗೇ ಪಾದಪೂಜೆ, ಇಲ್ಲವೆ ಟೊಪ್ಪಿಯ ಬೆಲೆ, ಇತ್ಯಾದಿಗಳು ಒಂದೊಂದು ರೂಪಕ ಚಿತ್ರವನ್ನು ಎತ್ತಿ ಹಿಡಿದು ನಿಲ್ಲಿಸುವವು.

ಇವುಗಳಲ್ಲಿ ಟೊಪ್ಪಿಯ ಬೆಲೆ, ನ ದೇವಾಯ ನ ಧರ್ಮಾಯ ಒಳ್ಳೆಯವುಗಳು. ಟೊಪ್ಪಿಯ ಬೆಲೆ ಜಯಮ್ಮ ಜಯಂತ ಪತ್ರಿಕೆಯ ಮ್ಯಾನೇಜರನನ್ನು ಸಾಹಸ ಮಾಡಿ ೨೦೦೦ರೂ. ಬೆಲೆಯ ಟೊಪ್ಪಿಯನ್ನು ಅವನನ್ನು ಹಾಕಿ ಸನ್ಮಾರ್ಗಕ್ಕೆ ಹಚ್ಚಿದ ಸಂಗತಿಯು ಅದ್ಭುತವಾದುದು. ನಮ್ಮ ಕನ್ನಡದ ತರುಣಿಯರು ಹೀಗೆ ಧೈರ್ಯ ತಾಳುವದು (ತಾಳಬೇಕು.) ಭೂಷಣಾಸ್ಪದ. ಲೇಖಕರು (ಹೆಸರಿಲ್ಲ) ನಮ್ಮ ಹೆಣ್ಣುಮಕ್ಕಳು ಇಷ್ಟು ಧೈರ್ಯ ತಳೆಯಬೇಕೆಂದು ಮಾಡಿದ ಸಂಕಲ್ಪಕ್ಕೆ ನಮ್ಮ ಬೆಂಬಲವಿದೆ. ಅದೇ ನ ದೇವಾಯ ನ ಧರ್ಮಾಯ ಕತೆಯಲ್ಲಿಯ ಆಚಾರ್ಯರನ್ನು ಮೋಸ ಗೊಳಿಸಲು ಸಂಘ ಕಟ್ಟಿದ ಶ್ರೀ ನಾರಾಯಣಭಟ್ಟರಂತೆ ನಾವು ಪ್ರೋತ್ಸಾಹಿಸಲಾರೆವು. ಯಾರೋ ಮೋಸಮಾಡಿ, ಯಾರೋ ಬುದ್ಧಿ ಕಲಿತರೆ ನಮಗೆ ಒಪ್ಪಿಗೆ. ಇನ್ನೊಂದು—ನರಹರಿಯು ತನ್ನ ತಂಗಿ ಕಮಲಳ ಸುಖಮಯ ದಾಂಪತ್ಯಕ್ಕೆ ಅಡ್ಡಿಯಾಗಬಾರದೆಂದು ಪ್ರಕಾಶನ ಪದರಿಗೆ ಕುಸುಮಳನ್ನು ಹಾಕಿ ಓಡಿ ಹೋಗುವದು ಎಂಥ ತ್ಯಾಗವೋ, ಎಂಥ ಆದರ್ಶವೋ ! ಈ ಘಟನೆಯಿಂದ ಕಮಲಳ ಜೀವನವು ಪರಿವರ್ತನೆ (ಜಯಕರ್ನಾಟಕ) ಯಾಗದಿದ್ದರೆ ನಾವು ಸಂತೋಷಪಡಬೇಕು.

## ಹುಚ್ಚು--ಹುಚ್ಚು

ಜೀವನ ಸಂಕಷ್ಟವನ್ನು ಹೊತ್ತುಕೊಂಡು ನಿಲ್ಲಲು ಬುದ್ಧಿಯಲ್ಲಿ ಸಾಮರ್ಥ್ಯವಿಲ್ಲದಿದ್ದರೆ ಅದು ಹುಚ್ಚು—ಹುಚ್ಚು. ನಮ್ಮ ಅಕ್ಕಪಕ್ಕದ ಮನೆಗಳಲ್ಲಿ ಮಠಗಳಲ್ಲಿ, ಬೀದಿಗಳಲ್ಲಿ ತಿರುಗಾಡುವ ಹುಚ್ಚರು ಇಂಥವರೇ ? ಈ ಸಾರೆಯ ಹುಚ್ಚಿ, ತಾಯಿಗರುಳು ಎರಡು ಕತೆಗಳು ಈ ಮಾದರಿಯವು. ಹುಚ್ಚಿ—ಗಂಡನನ್ನು, ಮಗನನ್ನು ಕಳೆದು ಕೊಳ್ಳುವಳು. ಈ ದುಃಖದ ಮರವೆಗೆ ಇನ್ನೊಬ್ಬರ ಮಗನನ್ನು ಕಂಡು, ಆಡಿಸುತ್ತಾ ಸಂತೋಷ ಪಡುವಳು. ಕಡೆಗೆ ಆ ಮನೆಯಿಂದಲೂ ಹೊರಗೆ ಹಾಕುವರು. ಕಡೆಗೆ ಹುಚ್ಚಿ. ತಾಯಗರುಳು—ಹುತ್ತಿನಲ್ಲಿ ಹುತ್ತಿನಂತೆ ಕತೆಯಲ್ಲಿ ಇನ್ನೊಂದು ಕತೆ. ಮಗನ ಆತ್ಮಹತ್ಯ ಅದಕ್ಕೆ ಕಾರಣ ಭಾವೀ ಪತ್ನಿಯ ಪ್ರೇಮಭಂಗ. ಬಿ.ಏ ಪಾಸಾದ ಮಗನ ಸಂಭ್ರಮ ನೋಡಬೇಕೆಂಬ ತಾಯಿಗೆ ಇದು ವಜ್ರಾಘಾತ. ಕಡೆಗೆ ಹುಚ್ಚಿ. ಸಾಹಿತಿ ತನ್ನ ಲೇಖನಿಯ ಸಹನೆ ಮೀರಿದ ಸಮಯದಲ್ಲಿ ಪಾತ್ರಗಳಿಗೆ ಹುಚ್ಚು ಕಟ್ಟಬೇಕು. ಇದು ಒಂದು ಬಗೆಯ ವಾಸ್ತವವಾಗುವದು.

ಜೀವನದಲ್ಲಿ ಇಂಥ ಸನ್ನಿವೇಶಗಳು ನಡೆಯುವವು. ಆದರೆ ಸಾಹಿತಿಯು ತನ್ನ ಪಾತ್ರಗಳನ್ನು ಇಷ್ಟು ಬೇಗ ಬುದ್ಧಿಶೂನ್ಯನಾಗಗೊಡದಂತೆ ನಡೆಯಬೇಕು. ನೂರು ಕಷ್ಟದಲ್ಲಿ ಮುಳುಗಿದವನು ಎದ್ದುನಿಂತರೆ ನಮಗೆ ವಂದ್ಯ. ಮಾನವನ ಭವ್ಯ ಜೀವನಕ್ಕೆ ಅವನು ಕರ್ಮಯೋಗಿಯಾಗಿ ಸಹಕಾರಿಯಾಗಿ ನಿಲ್ಲುವನು.

## ಉಳಿದವು

ಭಾವನೆಯ ಸುಳಿಯಲ್ಲಿ ಸುತ್ತಿಕೊಂಡು ಹಬ್ಬಿನಿಂತ ನೆಳಲ ಆಳಲೂ ಕಾಲ-ಸ್ಥಾಲದ ಮೇರೆ ಮೀರಿದ ಮೇಸ್ತ್ರಿಮಾದಣ್ಣ ಮತ್ತು ರಿಕ್ಷಾವಾಲರೂ ತಮಗೆ ಹಿತವೆನಿಸದ, ಅನ್ಯರಿಗೆ ಅಹಿತ ಬಗೆಯದ ಕೊಂಚಪ್ಪಣ್ಣ ಮತ್ತು ಉಪಚಾರದ ಉಪ್ಪಣ್ಣನವರೂ ಕಥಾಪ್ರಪಂಚದಲ್ಲಿ ಕೈಗೂಡದ ಆಸೆಗಳಂತೆ.

## ಚೈತ್ರ ಪಟ್ಟ

ಚೈತ್ರಪಟ್ಟಕ್ಕೆ ಕೊನೆಗೆ ನಾಲ್ಕು ಕತೆಗಳು ನಿಲ್ಲುವವು. ನಾವು ಮದುವೆಗೆ ಹೋದದ್ದು, ಸ್ಯಾನಿಟರಿ ಇನಸಪೆಕ್ಟರರ ಸಂಸಾರ, ಆಳುಮಗ ಕೊನೆಗೆ ಹಳೆಯನೋಟಗಳು............

ನಾವು ಮನೆಗೆ ಹೋದದ್ದು-ವಿಷಯ ಸರ್ವಶ್ರುತ. ಲಗ್ನ ಮುಂತಾದ ಸಮಾರಂಭಗಳಿಗೆ ಹೋಗುವ ಮುಂದೆ ಹೆಂಡತಿಯು ಭಾರೀ ಕಿಮ್ಮತ್ತಿನ ಸೀರೆಯನ್ನು ಬೇಡುವದು ಸತ್ಯ. ಮೇಲೆ ಉಡುಗರೆ ಇನ್ನೊಂದು ಸೀರೆ ಹಣದ ಅಪವ್ಯಯವೆಂದು ಗಂಡನ ಕೋಪ. ಮದುವೆಗೆ ಸರಿಯಾದ ವೇಳೆಗೆ ಹೋಗಬೇಕೆಂದು ಬಸ್ಸು ಹಿಡಿಯುವರು ಬಸ್ಸಿನಲ್ಲಿ ವಿಪರೀತ ಗದ್ದಲ. ಹೆಂಡತಿಯು ಒಂದು ಕೋಳೀ ತತ್ತಿಯ ಬುಟ್ಟಿಯ ಮೇಲೆ ಬೀಳುವಳು. ಸೀರೆಯೆಲ್ಲ ಹೊಲಸು. ತಿರುಗಿ ಬರುವರು. ಹೆಂಡತಿಯ ಆಗ್ರಹಕ್ಕೆ ಗಂಡನು ಅನೇಕ ಸಲ ಅಸಮಾಧಾನ ಪಡುವನು. ೧೫೦ರೂ. ಸೀರೆಯನ್ನು ಉಟ್ಟು ಸಂಭ್ರಮದ ಮೂರ್ತಿಯಾದ ಹೆಂಡತಿಯನ್ನು ದುರ್ದೈವವು ಹಿಡಿದು ನಿಲ್ಲಿಸುವದು. ಇಲ್ಲಿ ಗಂಡನ ಜೊತೆಗೆ ನಮಗೂ ಒಂದಿಷ್ಟು ವಿಷಾದವೆನಿಸುವದು. ಅಕಸ್ಮಿಕ ಘಟನೆಯಿಂದ ಹೆಂಡತಿಯ ಮೇಲೆ ಸಿಟ್ಟಾದ ನಮ್ಮ ಮನಸು ಹಾಯ್ ಎನ್ನುವದು. ಕತೆಯ ಓಟ ನಿರರ್ಗಳ, ಕೃತ್ರಿಮತೆಯ ಸೋಂಕಿಲ್ಲ. ಚೆಂಡು ಇಳುಕಲಿಗೆ ಓಡಿದಂತೆ ಕತೆಯು ಮುಂದೆ ಮುಂದೆ ಓಡುವದು. ಆದರೆ ವಿಷಯದಲ್ಲಿ ನಾವೀನ್ಯವಿಲ್ಲ.

ಆಳುಮಗ — ಬಸವ ಯಜಮಾನಿಯಂತೆ ಧಾರ್ಮಿಕ ತಾರತಮ್ಯಗಳನ್ನರಿಯದ ಬಡವ, ಸಭ್ಯ ಒಂದಿನ ಸಿಂದಿಯ ಕಸಬರಿಗೆ ಅಡಿಗೆಯ ಮನೆಯಲ್ಲಿ ಉಳಿಯುವದು. ಯಜಮಾನಿ ಬೈಗಳ ಮಳೆಯನ್ನು ಸುರಿಸಿ ಬಸವನ ತಲೆಯನ್ನು ಒಡೆಯುವಳು. ಒಂದು ಹೆಣ್ಣಿನಿಂದ ಇಷ್ಟು ಅವಮಾನವನ್ನು ಪಡೆಯುವಳು. ಎಂದು ತನ್ನಲ್ಲಿಯ ಪುರುಷಶಕ್ತಿಯನ್ನು ಕೆರಳಿಸಿಕೊಂಡು ನಿಲ್ಲುವನು. ಆದರೆ ಬಡತನ ಅದನ್ನು ತಣ್ಣಗೆ ಮಾಡುವದು. ಒಂದಿನ ಸೆರೆಕುಡಿದು ಓಣಿಯಲ್ಲಿ ಬಿದ್ದ ಯಜಮಾನನನ್ನು ಮನೆಗೆ ತರುವನು. ಅವಳಿಗೆ ಅಂದು—ತನ್ನ ಹೃದಯೇಶ್ವರನಿಗೆ ಸೆರೆ ಕುಡಿಯುವ ಚಟವಿದೆಯೆಂದು ತಿಳಿಯುವದು. ಕಸಬರಿಗೆಯ ತಪ್ಪಿನಿಂದ ಬಸವನು ರಕ್ತಸುರಿಸಬೇಕಾಯಿತು. ಆದರೆ ಹೊಟ್ಟೆತುಂಬ ಸೆರೆಯನ್ನು ತುಂಬಿದ ಗಂಡನಿಗೆ ಯಜಮಾನಿಯು ಕೊಡುವ ಶಿಕ್ಷೆ ಎಂಥದು ! ಅವನು ಮುಂದೂ ತನ್ನ ಪ್ರಾಣಪದಕ ? ಎರಡು ಭಾವನೆಗಳ ತಲಕುಮಲಕುಗಳೇ ಕಥೆಯ ವಸ್ತು. ಕಥೆಯು ಒಳ್ಳೆಯದು. ಆದರೆ ಜೀವಕ್ಕೆ ಹೊಂದಿಕೆ ಎನಿಸುವ ದೇಹವಿಲ್ಲ.

ಶಾಲಿನಿಯ ಹಳೆಯ ನೋವುಗಳು- ಬಂದುದು ದುಃಖದಾಯಕ ಸಂಗತಿಯೇ ಸರಿ. ಈ ದು:ಖಕ್ಕೆ ತಾನೇ ಕಾರಣಗಳು ಅದಕ್ಕೆ ಅವಳ ತಂದೆ ಸಹಕಾರಿ ಸುಶಿಕ್ಷಿತೆಯಾದ, ಸುಸಂಸ್ಕೃತಳಾದ ಶಾಲಿನಿಯು ಮನುಸು ಮಾಡಿದ್ದರೆ, ಉದಾತ್ತಳಾಗಬಹುದಿದ್ದಿತು. ತನಗಾಗಿ ದುಡಿದು, ಮಾನವಳನ್ನಾಗಿ ಮಾಡಿದ ಒಬ್ಬ ಬಡ ಅಧ್ಯಾಪಕನನ್ನು ಹೀಗೆ ನಡುನೀರಿನಲ್ಲಿ ಬಿಡುವದು ಅವಳಿಗೆ ಒಪ್ಪುವ ವಿಷಯವಲ್ಲ. ಮಕ್ಕಳ ಉನ್ನತಿಯನ್ನು ಬಯಸುವ ಶಾಲಿನಿಯು ಒಬ್ಬ ಅಂಧಕನನ್ನೂ ಮುಗ್ಧ ಪ್ರೇಮಕ್ಕೆ ಮಾರಿಕೊಂಡ ಹೃದಯವನ್ನಲಂಕರಿಸಿ ನಿಂತ ಒಬ್ಬ ಸಾಧುವನ್ನು ತನಗಾಗಿ ಕುರುಡನಾಗಿ, ಕುರೂಪಿಯಾಗಿ ನಿಂತ ಮೇಲೆ ಅಂಥಂತ ಮಸಿನಲ್ಲಿ ನೂಕಿ ಹೋಗುವದು. ಹೃದಯ ದೌರ್ಬಲ್ಯವಲ್ಲವೇ? ಇಂಥ ದೌರ್ಬಲ್ಯ ಮೂರ್ತಿಯಿಂದ ಮಕ್ಕಳು ಯಾವ ಶಿಖರವನ್ನೇರಬೇಕು! ಇದಕ್ಕೆ ನೀನು ಎಷ್ಟೇ ಮರುಗಿದರೇನು? ನಮ್ಮ ಸಹಾನುಭೂತಿ ಸಿಕ್ಕಲಾರದು. ಕತೆಯಲ್ಲಿ ಇದೊಂದು ದೋಷವವಲ್ಲವೇ? ಚೈತ್ರ ಪಟ್ಟಕ್ಕೆ ಏರಿನಿಂತ ಶಾಲಿನಿಯು ಹೃದಯ ದೌರ್ಬಲ್ಯದಿಂದ ಹತ್ತಿಪ್ಪತ್ತು ಮೆಟ್ಟಲು ಕೆಳಗೆ ಇಳಿಯುವಳು.

ಸ್ಯಾನಿಟರಿ ಇನೆಸ್ಪೆಕ್ಟರರು ಶ್ರಮಜೀವಿ. ನಿತ್ಯ ಕರ್ಮದ ಪೂರ್ತಿಗಾಗಿ ಊರಲ್ಲಿ, ಗಟಾರಗುಂಟೆ ನೊಣಗಳನ್ನು ಹಾರಿಸುತ್ತ ನೊರಜುಗಳನ್ನು ಎಬ್ಬಿಸುತ್ತ, ಹೊಲಸನ್ನು ಊರ ಹೊರಗೆ ಸಾಗಿಸುತ್ತ, ಕೆಳಗಿನ ಜನರ ಅಸಭ್ಯ ಸಂಗತಿಯಿಂದ ಜೀವನದಲ್ಲಿ ಜಿಗುಪ್ಸೆ ಪಟ್ಟುಕೊಳ್ಳುವನುತನ್ನ ಕೆಲಸದ ಗಡಿಬಿಡಿಯಲ್ಲಿ ಹೆಂಡತಿ ಪಾತಮ್ಮ ಸಹ ಕಂಡುಬಂದವಳಲ್ಲ. ಏನೋ ಮನದ ನೆಮ್ಮದಿಗಾಗಿ ಗೆಳೆಯರಲ್ಲಿ ರಾತ್ರಿ ಒಂದು ಆಟ. ಆಯಿತು ಅವರ ನಿತ್ಯಕ್ರಮ. ಪಾತಮ್ಮನ ಊಟ ಉಡಿಗೆ ಅವರಿಗೆ ರುಚಿಸದು. ಯಂತ್ರದಂತೆ ತುಂಬಿಕೊಂಡು ಕರೆಗೆ ಓಗೊಟ್ಟು ಓಡುವರು. ಪಾತಮ್ಮ ಒಂದು ದಿನ ತಿರುಗಾಡಿಕೊಂಡು ಬರುವ ಎಂದು ಹಟ ಹಿಡಿಯುವಳು. ಸಮ್ಮತಿಸುವ. ತಿರುಗುತ್ತ ಬೈಲಿಗೆ ಬರುವರು. ಅಲ್ಲಿಯ ಸುಂಧರವಾದ ದೃಶ್ಯ. ಮನ ಮೆಚ್ಚುವ ಗಾಳಿ. ಇವುಗಳ ನಡುವೆ ಪಾತಮ್ಮನ ಸುಂದರ ಮೂರ್ತಿ. ಹಿನ್ನೆಲೆಯು ಪಾತಮ್ಮನನ್ನು ಬಣ್ಣ ಬಳೆದು ನಿಲ್ಲಿಸುವದು. ಇನಸ್ಪೆಕ್ಟರರಿಗೆ ಗೃಹಿಣಿ ಎಂಬ ಭಾವನೆಯು ಕೆರಳಿ ನಿಲ್ಲುವದು. ಅವರ ಕಣ್ಣ ಮೇಲಿನ ಪರದೆಯು ಹಾರುವದು. ಜಿಗುಪ್ಸೆಗೊಂಡ ಜೀವನವು ಒಮ್ಮೆಲೆ ಬಾಯಿಬಿಡುವದು. ಹರ್ಷಗೊಳ್ಳುವನು. ಪುಲಕಿತನಾಗುವನು. ತಿರುಗಿ ಮನೆಗೆ ಬರುವರು. ಆಟದವನು ಬಾಗಿಲಲ್ಲಿ ನಿಂತು ಕರೆಯುವನು. ಅವನಿಗೆ ನಿರಂತರ ಅಪ್ಪಣೆಯನ್ನು ಕೊಡುವನು....ಕತೆಯು ಎಷ್ಟು ಮಾರ್ಮಿಕವಾಗಿ ಬೆಳೆದಿದೆ! ಎಂಥ ಪರಿಣಾಮದಲ್ಲಿ ಕೊನೆಗೊಂಡಿದೆ! ಆರಂಭಕ್ಕೂ ಕೊನೆಗೂ ಎಂಥ ಮೈತ್ರಿ! ಲೇಖಕಿ ರುದ್ರಮ್ಮರ ಇಂಥ ಜೀವನದ ಸೂಕ್ಷ್ಮಾವಲೋಕಕ್ಕೆ ನಾವು ಮೆಚ್ಚಬೇಕು! ಅವರಿಂದ ಇಂಥ ನೂರಾರು ಕತೆಗಳನ್ನು ಆಶಿಸಬೇಕು! ಕತೆಯನ್ನು ಹೇಳುವ ರೀತಿ, ಪಾತ್ರಗಳನ್ನು ಆರಿಸುವ ಜಾಣ್ಮೆ, ಅವುಗಳನ್ನು ಉನ್ನತ ಸ್ಥಾನಕ್ಕೆ ಏರಿಸುವ ಗೈಮೆ ಶ್ಲಾಘನೀಯವು. ಈ ದೃಷ್ಟಿಯಿಂದಲೇ "ಸ್ಯಾನಿಟರಿ ಇನಸ್ಪೆಕ್ಟರರ ಸಂಸಾರ" ಚೈತ್ರಮಾಸದ ಕತೆಗಳಲ್ಲಿ ಶ್ರೇಷ್ಠವಾದುದು.


ಮಿತ ಸಂತತಿಯ ಸಲುವಾಗಿ

**ಸಂತತಿ ಸಂಯಮನ**

ವಿ| ಮಾಹಿತಿ: ಔಷಧದ ಕೂಡ ಬೆಲೆ ೫ ರೂ. ಅಂಚೆವೆಚ್ಚ ೯ ಆಣೆ.

ಔಷಧ ಬೇಕಾದವರು ಹಣವನ್ನು ಮುಂಗಡ ಕಳಿಸಬೇಕು.

**ವನೌಷಧಿ ಕಾರ್ಯಾಲಯ ಹುಬ್ಬಳ್ಳಿ**

Reg. No. B. 3148 | LICENCE No. 3 Licenced to Post without Prepayment | KARMAVEER 17-6-46




ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಜೂನ ತಾ. ೧೭ರಿಂದ ೨೩ರ ವರೆಗೆ

## ಮೇಷ

ಸ್ವಂತದ ಪ್ರಕೃತಿ ಉತ್ತಮ. ಆದರೆ ಹೆಂಡತಿ ಮತ್ತು ಮಕ್ಕಳ ಪ್ರಕೃತಿ ದುರಸ್ತಿ ಉಳಿಯದು. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ತೊಂದರೆ ವಿಪರೀತ. ಅಸಭ್ಯ ಮತ್ತು ಅನಪೇಕ್ಷಿತ ಅತಿಥಿಗಳ ಸತ್ಕಾರ ಮಾಡುವ ಅಪರಿಹಾರ್ಯ ಪ್ರಸಂಗ. ಉದ್ಯೋಗದಲ್ಲಿ ಪ್ರತಿಷ್ಠೆ ಅನುಕೂಲ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಪ್ರತಿಪಕ್ಷಿಗಳು ಗ್ರಾಮ್ಯ ಶಬ್ದಗಳಿಂದ ಇಲ್ಲವೆ ಅಂಥ ಕೃತಿಗಳಿಂದ ಛಲಿಸುವದು, ಆದರೆ ಯಶಾಪಯಶಸ್ಸಿನಲ್ಲಿ ತಾಟಸ್ಥ್ಯ. ಮೈತ್ರಿಯಲ್ಲಿ ವಿರೋಧ. ಚಾತುರ್ಯ ಇಲ್ಲವೆ ಸಾಹಸದ ಮಾನದಿಂದ ಯಶಸ್ಸು ಕಡಮೆ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಅಶ್ವಿನಿಯ ೧ ನೆ ಮತ್ತು ೩ ನೆ ಮತ್ತು ಭರಣಿಯ ೧....೩—೪ ಚರಣಗಳಿಗೆ ತೊಂದರೆ ಕಡಮೆ. ತಾ. ೧೭—೧೮—೧೯ ಅನುಕೂಲ.

## ವೃಷಭ

ಎಲ್ಲರ ಪ್ರಕೃತಿ ಉತ್ತಮ. ಆದರೆ ಪರಕೀಯರ ಒಳ್ಳೆ ಕೆಟ್ಟ ಸಂಗತಿಗಳಿಂದ ಪತಿಪತ್ನಿಯರಲ್ಲಿ ಮೇಲಿಂದ ಮೇಲೆ ವಾಗ್ವಾದ. ಸ್ಥಾವರ ಜಂಗಮ ಸಂಗ್ರಹದಲ್ಲಿ ಹೊಸ ಹೆಚ್ಚಳ ಮಕ್ಕಳ ಲೌಕಿಕವಾಗುವ ಯೋಗ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಆದರೆ ಢೋಂಗಿತನದ ಬಹಳ ಲೋಕಾಪವಾದ. ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಯಾವದೇ ಕೆಲಸದಲ್ಲಿ ಎರಡನೆಯವರ ಸಲುವಾಗಿ ಯೋಚಿಸಿದ ಯಶಸ್ಸು ನಿಮ್ಮ ಪದರಿನಲ್ಲಿ ಅಚಾನಕ ಬೀಳುವ ಯೋಗ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ರೋಹಿಣಿಗೆ ಹೆಚ್ಚು ಒಳಿತು. ತಾ ೧೮—೧೯—೨೨—೨೩ ಅನುಕೂಲ.

## ಮಿಥುನ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ, ಪ್ರಿಯ ಜನರ ಸಹವಾಸ ಸ್ಥಾನದಲ್ಲಿ ಸ್ವಲ್ಪ ಹೆಚ್ಚಳ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಪ್ರತಿಯೊಂದು ಸಂಗತಿಯಲ್ಲಿ ಮನಸ್ಸಿನಂತೆ ಯಶಸ್ಸು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ವಿಜಯ ಅಹಂಮನ್ಯತನದ ದರ್ಪ ಬಹಳ ಬೆಳೆದು ಆ ಭರದಲ್ಲಿ ಸಣ್ಣ ದೊಡ್ಡವರಿಂದ ತಿಳಿದೂ ತಿಳಿಯದೆಯೆ ಪ್ರಮಾದವಾಗುವ ಅಂಜಿಕೆ. ಮಿತ್ರ ಸುಖ ಉತ್ತಮ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರವು ಉತ್ತಮ. ಆರಿದ್ರಾಕ್ಕೆ ಹೆಚ್ಚು ಅನುಕೂಲ. ತಾ ೨೦—೨೧—೨೨—೨೩ ಅನುಕೂಲ.

## ಕರ್ಕ

ಪ್ರಕೃತಿ ಕ್ಷಣದಲ್ಲಿ ನೆಟ್ಟಗಿದ್ದರೆ ಮರುಕ್ಷಣದಲ್ಲಿ ಕೆಡುವದು. ಆದರೆ ಸ್ತ್ರೀ ಸುಖ ಉತ್ತಮ. ಉದ್ಯೋಗದಲ್ಲಿ ಉತ್ತಮ. ಪ್ರಗತಿ ಒಳ್ಳೆ ಪ್ರತಿಷ್ಠೆ ತುಂಬ ಲಾಭ ಆದರೆ ವೆಚ್ಚವೂ ದೊಡ್ಡ ಪ್ರಮಾಣದಲ್ಲಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಿಗೆ ಸಮಾನ ಸ್ಥಿತಿ. ಮಿತ್ರ ಸುಖ ಉತ್ತಮ. ಪತ್ರವ್ಯವಹಾರಕ್ಕಿಂತ ಭೆಟ್ಟಿ ಮತ್ತು ಪ್ರವಾಸ ಅನುಕೂಲ. ಪುಷ್ಯಕ್ಕೆ ತೊಂದರೆ ಕಡಮೆ. ತಾ ೧೮—೧೯—೨೨—೨೩ ಅನುಕೂಲ.

## ಸಿಂಹ

ನಿಮ್ಮ ಪ್ರಕೃತಿ ಉತ್ತಮ. ಆದರೆ ಹೆಂಡತಿಯದು ಬಹಳ ಕೆಟ್ಟು ಸಣ್ಣ ಸಣ್ಣ ಸಂಗತಿಗಳಲ್ಲಿಯೂ ಉಭಯತರಲ್ಲಿ ಬಹಳ ಮತಭೇದ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ. ಆದರೆ ಪ್ರತಿಷ್ಠೆ ಒಮ್ಮೆಲೆ ಕುಂದುವ ಪ್ರಸಂಗ ಮಿತ್ರ ಸುಖ ಉತ್ತಮ. ಸ್ಥಾವರದಲ್ಲಿ ಸ್ವಲ್ಪ ಹೆಚ್ಚಳ. ಆದರೆ ಬರುವ ಉತ್ಪನ್ನದಲ್ಲಿ ಕೆಲವು ಹಾನಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅಪಯಶಸ್ಸಿನ ಚಿಹ್ನಗಳು. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಪೂರ್ವಾಕ್ಕೆ ತೊಂದರೆ ಕಡಮೆ. ತಾ. ೨೦—೨೧ ಅನುಕೂಲ.

## ಕನ್ಯಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಆದರೆ ಅಗಂತುಕ ಅನಪೇಕ್ಷಿತ ಸಂಗತಿಯ ಭಗಭಗಿ ಬೆನ್ನು ಹತ್ತುವ ಬಹಳ ಅಂಜಿಕೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಬಹಳ ಉತ್ತಮವೆ. ಆದರೆ ನಿರರ್ಥಕ ವೆಚ್ಚದ ಪ್ರವಾಸಗಳು ಬಹಳ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು ಬಹಳ. ಆದರೆ ಪುತ್ತು ತೊಂದರೆ ವಿಪರೀತ. ಸಹಜವಾಗಿ ಮಾತಾಡಿದರೂ ಅದು ಬಡಿದಾಟದ ಸ್ವರೂಪ ತಾಳುವ ಸರತಿ ಪ್ರವಾಸಾದಿ ಕೆಲಸ ಅನುಕೂಲ. ಹಸ್ತಾಕ್ಕೆ ತೊಂದರೆಯಿಂದಲೇ ಯಶಸ್ಸು. ತಾ ೧೮-೧೯-೨೨ ೨೩ ಅನುಕೂಲ.

## ತುಲಾ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಆದರೆ ಉಳಿದ ಪ್ರಾಪಂಚಿಕ ವಿಷಯಗಳಲ್ಲಿಯೂ ಕಲಹ ಮತಭೇದ ಸಿಟ್ಟು ಸೆಡವು ಮೊದಲಾದವು ವಿಪರೀತ ಉದ್ಯೋಗದಲ್ಲಿ ಪ್ರಗತಿ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ. ಮಿತ್ರ ಸುಖ ಉತ್ತಮ. ಸ್ಪಷ್ಟ ಶುಭಕರ ಮತ್ತು ಭಾವೀ ಸೂಚಕ ಪ್ರವಾಸಾದಿ ಕೆಲಸ ಅನುಕೂಲ. ಸ್ವಾತಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೦ ೨೧ ಅನುಕೂಲ.

## ವೃಶ್ಚಿಕ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಆದರೆ ತಾಯಿ ತಂದೆ ಇಲ್ಲವೆ ತತ್ಸಮ ವ್ಯಕ್ತಿಗಳೊಡನೆ ವಿರೋಧ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಮತ್ತು ಅವಚಿತ ಲಾಭದ ಸಂಭವ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಪ್ರವಾಸಾದಿ ಕೆಲಸ ತೊಂದರೆಯಿಂದಲೆ. ಅನುರಾಧೆಗೆ ತೊಂದರೆ ಕಡಮೆ. ತಾ. ೧೭, ೧೮, ೧೯, ೨೨ ಅನುಕೂಲ.

## ಧನು

ಪ್ರಕೃತಿ ಮತ್ತು ಸ್ತ್ರೀ ಸುಖ ಅನುಕೂಲ. ಮಕ್ಕಳಲ್ಲಿ ಉನ್ನತಿ ಆದರೆ ಬಹುತರ ವಿಷಯದಲ್ಲಿ ಮಾನಸಿಕ ಸುಖದ ಅಭಾವವೆ. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಒಳ್ಳೆ ಪ್ರತಿಷ್ಠೆ ಮತ್ತು ತುಂಬ ಲಾಭ, ಆದರೆ ಹಿತಶತ್ರುಗಳಿಂದ ಪ್ರತಿಯೊಂದು ಕೆಲಸದಲ್ಲಿ ಅಡ್ಡಗಾಲು ಹೊಡೆಯುವ ಪೇಚು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯಶಸ್ಸು. ಮಿತ್ರರಲ್ಲಿ ಕ್ಲೇಶ. ಪ್ರವಾಸಾದಿ ಕೆಲಸ ಹಿತಕರ. ಮೂಲಾದ ೧ ನೇ ಮತ್ತು ೩ ನೆ ಹಾಗು ಪೂರ್ವಾಷಾಢಾದಕ್ಕೆ ೧.ನೇ ೩ ನೇ ೪ ನೆ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೧೮, ೧೯, ೨೦, ೨೧ ಅನುಕೂಲ.

## ಮಕರ

ನಿಮ್ಮ ಪ್ರಕೃತಿ ಅನುಕೂಲ, ಆದರೆ ಹೆಂಡತಿಯದು ಕೆಡುವದು. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಸುಖ ಕಡಮೆ. ಸ್ಥಾವರದಲ್ಲಿ ಸ್ವಲ್ಪ ಹೆಚ್ಚಳ. ಉದ್ಯೋಗದಲ್ಲಿ ಪ್ರಗತಿ ಸಾಧಾರಣವೆ ಆದರೆ ಪ್ರತಿಷ್ಠೆ ಮತ್ತು ಲಾಭವೂ ಅನುಕೂಲ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಶ್ರವಣಾಕ್ಕೆ ತೊಂದರೆ ಕಡಮೆ. ತಾ. ೧೮, ೧೯, ೨೨, ೨೩ ಅನುಕೂಲ.

## ಕುಂಭ

ಪ್ರಕೃತಿಗೆ ಆರಾಮು ಕಡಮೆಯೆ. ಪ್ರಾಪಂಚಿಕ ಸುಖದಲ್ಲಿ ಬಗೆಬಗೆಯ ವಿರಸ, ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಕಡಮೆ. ಆದರೆ ಪ್ರತಿಷ್ಠೆ ಸ್ವಲ್ಪ ಅನುಕೂಲ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವೆಚ್ಚ ಮತ್ತು ತೊಂದರೆ ಇಮ್ಮಡಿ. ಆದರೆ ಯಶಸ್ಸು ನಿಶ್ಚಿತ ಆಪ್ತರಿಂದ ಕೆಲ ವಿಷಯಗಳಲ್ಲಿ ನಿರರ್ಥಕ ಅಡಚಣಿ. ಪ್ರವಾಸ ತೊಂದರೆಯದು ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಶತತಾರಿಕೆಗೆ ತೊಂದರೆ ಕಡಮೆ. ತಾ. ೨೦, ೨೧, ೨೨, ೨೩ ಅನುಕೂಲ.

## ಮೀನ

ಪ್ರಕೃತಿ ಮತ್ತು ಸ್ತ್ರೀ ಸುಖವೂ ಉತ್ತಮ. ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಕಡಮೆಯೆ ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಅತಿಶಯ ಉತ್ತಮ. ಶತ್ರುಗಳ ಮತ್ತು ಸಂಕಟಗಳ ನಾಶ ಹಾ ಹಾ ಅನ್ನುವುದರೊಳಗಾಗಿ ಮಾಡಲ್ಪಡುವ ಅದ್ಭುತ ಪ್ರಸಂಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಮನಸ್ಸಿನಂತೆ ಯಶಸ್ಸು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಉತ್ತರಾಭಾದ್ರಪದಕ್ಕೆ ಹೆಚ್ಚು ಅನುಕೂಲ. ತಾ. ೧೭, ೧೮, ೧೯, ೨೨ ಅನುಕೂಲ.

# ಪಾಲಿಸ್ತಾನದಲ್ಲಿ ವೃತ್ತವನ್ನು ಚೌಕಾಗಿ ಮಾಡುವ ಆಟ

—೧ ನೇ ಪುಟದಿಂದ ಮುಂದರಿದುದು

ರನು ಸತ್ತಿರಬಹುದು. ಆದರೆ ಅವನು ಯುರೋಪಿನಲ್ಲೆಲ್ಲ ಬಿತ್ತಿಬೆಳೆದ ಯಹೂದ್ಯ ದ್ವೇಷಮಾತ್ರ ಇನ್ನೂ ಸಚೇತನವಾಗಿದೆ. ಅದರ ಕುಲವನ್ನು ಅಕ್ಷರಶಃ ಕತ್ತರಿಸಿ ಒಗೆಯಲಾಯಿತು. ಯುರೋಪಿನಲ್ಲಿ ಇಂದು ಬಹಳಾದರೆ ಕೆಲ ಲಕ್ಷ ಯಹೂದ್ಯರು ಉಳಿದಿರಬಹುದು. ಅವರೂ ಬೇಗನೆ ಎಲ್ಲಾದರೊಂದೆಡೆ ಆಶ್ರಯ ಪಡೆಯದೆ ಹೋದರೆ ಹೆಸರುಳಿದು ಹೋಗುವದರಲ್ಲಿ ಸಂದೇಹವಿಲ್ಲ. ಆದುದರಿಂದ ಪಾಲಿಸ್ತಾನವನ್ನು ಯಹೂದ್ಯ ಮಾತೃಭೂಮಿಯಾಗಿ ಮಾಡುವದು ಇಂದು ಯಹೂದ್ಯರಿಗೆ ಹೆಚ್ಚುಕಡಿಮೆ ಜೀವನ ಮರಣದ ಪ್ರಶ್ನೆಯಾಗಿ ಕುಳಿತಿದೆ. ಆದುದರಿಂದ ವಲಸೆ ನಿಯಂತ್ರಣದ ಕಾಯಿದೆಯನ್ನು ಮುರಿದಾದರೂ ಎಂಥ ಬೆಲೆ ತೆತ್ತಾದರೂ ಪಾಲಿಸ್ತಾನದಲ್ಲಿ ಪ್ರವೇಶಿಸುವ ಛಲ ಅವರ ಮನಸಿನಲ್ಲಿ ಬೇರೂರಿದೆ. ಅದಕ್ಕೆ ಬೇಕಾದ ಧನಬಲವೂ ಅವರಲ್ಲಿದೆ. ಅಮೇರಿಕೆಯಲ್ಲಿ ಅವರಿಗೆ ಪ್ರಚಂಡ ವರ್ಚಸ್ಸೂ ಇದೆ. ಆದುದರಿಂದ ಅರಬರ ವಿರೋಧಕ್ಕೆ ತಲೆವಾಗಿ ಬ್ರಿಟಿಶರು ವಲಸೆಯನ್ನು ನಿಲ್ಲಿಸಿದೊಡನೆ ಅವರು ಕಳ್ಳತನದಿಂದ ಪ್ರವೇಶಿಸಲು ಸಮರ್ಥರಾದರು. ತಮ್ಮ ಕಾರ್ಯಸಾಧನೆಗಾಗಿ, ಸ್ವಾಭಾವಿಕವಾಗಿ ಶಾಂತತಾಪ್ರಿಯರಾದ ಅವರು, ಈಗ ಹಿಂಸೆಯನ್ನು ದೊಡ್ಡ ಪ್ರಮಾಣದಲ್ಲಿ ಬಳಸಲು ಸಿದ್ಧರಾಗಿದ್ದಾರೆ. ಹಿರಿಯರಿಗೆ ಇದು ಸಹಿಸುವದಿಲ್ಲವಾದರೂ ಕಿರಿಯರು ಸೈನ್ಯ ಕೂಡಾ ಕಟ್ಟಿ ಸಿದ್ಧರಾಗಿದ್ದಾರೆ. ಈ ಸಮಸ್ಯೆಯನ್ನು ಬಗೆಹರಿಸಲಾರದೆ ಅಭಿಮಾನಿಗಳಾದ ಬ್ರಿಟಿಶರು ಕೂಡ ಅಮೇರಿಕೆಯ ಸಕ್ರಿಯ ಸಹಕಾರ ಬೇಡಿದರು. ಆಂಗ್ಲೋ-ಅಮೇರಿಕನ್ ವಿಚಾರಣಾ ಸಮಿತಿಯವರು ಹೊರಡಿಸಿದ ವರದಿಯ ವಿರೋಧಿಸಲು ಯಹೂದ್ಯರೂ ಅರಬರೂ ಟೊಂಕ ಕಟ್ಟಿದ್ದಾರೆ. ೧ ಲಕ್ಷ ಯಹೂದ್ಯರಿಗೆ ಒಡನೆ ಪ್ರವೇಶ ಕೊಡುವದು ಅರಬರಿಗೆ ಸಹಿಸುವದಿಲ್ಲವಾದರೆ ಒಂದೇ ಲಕ್ಷವೆಂದು ನಿರ್ಬಂಧ ಹಾಕಿದ್ದು ಯಹೂದ್ಯರಿಗೆ ಒಪ್ಪಿಗೆಯಿಲ್ಲ.

ಇಬ್ಬರನ್ನೂ ಸಂತೋಷಗೊಳಿಸುವದು ಬ್ರಿಟಿಶರ ಪ್ರಾಚೀನ ಆಟ. ಪ್ರಸಿದ್ಧ ಲೇಖಕ ನಿಹಾಲಸಿಂಗರು ಬ್ರಿಟಿಶರ ಈ ಧೋರಣಕ್ಕೆ "ವೃತ್ತವನ್ನು ಚೌಕವಾಗಿ ಮಾಡುವ ಆಟ" ಎಂದು ಹೆಸರಿಟ್ಟದ್ದು ಉಚಿತವೇ ಆಗಿದೆ. ಈ ಬಾರಿ ಈ ಆಟದಲ್ಲಿ ಸಹಾಯ ನೀಡಲು ಅಮೇರಿಕೆಯನ್ನೂ ಕರೆದಿರುವರೆಂಬುದೇ ವಿಶೇಷ.




ಶೇಲಥಾ

ಪ್ರತಿಯೊಬ್ಬರಿಗೆ ಬೇಕಾಗುವ ವ ಅಂಗಡಿಕಾರರು ಇಡುವ ಸಿದ್ಧೌಷಧಿಗಳು

✲

ಜಂತು ಜುಲಾಬಿಗೆ

**ಸೆಂಟೊನೈನ ಕಂಪೌಂಡ ಗುಳಿಗೆಗಳು**

ವಾತ, ನೋವು, ಚರ್ಮರೋಗಗಳಿಗೆ

**ನವನಾರಾಯಣ ತೈಲ**

ಸುಟ್ಟ, ಜಜ್ಜಿದ, ಎಲ್ಲ ಘಾಯಗಳಿಗೆ

**ನಿಯೋ ಸೆಪ್ಟಿಸ್ಯಾಡ ಮಲಮ**

ಖಜ್ಜಿ, ಎಲ್ಲ ತರದ ಚರ್ಮ ರೋಗಗಳಿಗೆ

**ಹುರುಕಿನ ಪುಡಿ**

ಹಲ್ಲು ರೋಗ, ಘಟ್ಟ ಆಗಲಿಕ್ಕೆ

**ಡೆಂಟೊ ಕ್ಲೀನ ಪುಡಿ**

ಎಲ್ಲ ತರದ ಜ್ವರ, ಜ್ವರಗಡ್ಡೆ ಅಶಕ್ತತೆಗೆ

**ಎಂಟಿ ಮಲೇರಿಯಾ ಗುಳಿಗೆ**

೧೨೦ಕ್ಕೆ ೨-೦-೦

ಅಖಿಲ ಭಾರತ ಆಯುರ್ವೇದ ಕಾಂಗ್ರೆಸ ವ ಪ್ರದರ್ಶನದಲ್ಲಿ ಭಂಗಾರದ ಮೆಡಲ ವ ೧ನೇ ತರಗತಿಯ ಪ್ರಶಸ್ತಿ ಪತ್ರ ಸಿಕ್ಕಿರುತ್ತದೆ. ವ್ಯಾಪಾರಿಗಳು ದರಗಳನ್ನು ತರಿಸಿಕೊಳ್ಳಬಹುದು.

**ಶೇಲಥಾ ಕೆಮಿಕಲ್ ಕಂಪನಿ**

ಬಡವರ ಬಂಧು ಕಾರ್ಯಾಲಯ ಸಿರಸಿ-ಕ್ಯಾನರಾ.



## ೧೦೦೦ ರೂಪಾಯಿಗಳ ಬಕ್ಷೀಸು

ಈ ಕೆಳಗಿನ ಔಷಧಗಳಲ್ಲಿ ಗುಣವಿಲ್ಲೆಂದು ಸಿದ್ಧಮಾಡಿ ಕೊಟ್ಟಲ್ಲಿ ೧,೦೦೦ ರೂ. ಇನಾಮು

**ಶ್ರೀ ಬಸವರಾಜ ಮೆಡಿಕಲ್ ಫಾರ್ಮಸಿ**

## ಪ್ರಮೇಹ ಗನೋರಿಯಾ ನಾಶಕ ಗುಟಿ

ಪ್ರಮೇಹ ಮೈಯಲ್ಲಿ ಭೇದಿಸಿದರೆ ತಮ್ಮ ಮತ್ತು ತಮ್ಮ ಭಾವೀ ಪೀಳಿಗೆಗೆ ನಾಶ ಮಾಡದೆ ಬಿಡಲಾರದು. ಇಂಥ ಮಹಾ ಹಾನಿಕಾರಕ ಎಲ್ಲ ೨೦ ಪ್ರಕಾರದ ಎಂತಹ ಹಳೇ ಪ್ರಮೇಹವಿದ್ದರೂ ಕೂಡ ಈ ಔಷಧದ ಸೇವನೆಯಿಂದ ತ್ವರಿತ ಗುಣವಾಗುತ್ತದೆ. ಮೂತ್ರ ಮಾರ್ಗ ಸ್ವಚ್ಛವಾಗಿ ಮೂತ್ರದ ಕಾಲಕ್ಕೆ ಉಂಟಾಗುವ ವೇದನೆ ಮತ್ತು ಉರುಪು ಇಲ್ಲದಂತಾಗುತ್ತದೆ. ಕೀವು ಮತ್ತು ಪ್ರಮೇಹ ಹೋಗುವದು ಬಂದಾಗುತ್ತದೆ. ಮೂತ್ರಾಶಯದ ಎಲ್ಲ ವಿಕಾರಗಳನ್ನು ನಷ್ಟಪಡಿಸಿ ಶರೀರದಲ್ಲಿಯ ಅಶುದ್ಧ ತತ್ವಗಳನ್ನು ಮೂತ್ರಮಾರ್ಗದಿಂದ ಹೊರದೂಡಿ ಪ್ರಮೇಹ ಮತ್ತು ಆದರಿಂದ ಉದ್ಭವಿಸಿದ ಎಲ್ಲ ವ್ಯಾಧಿಗಳನ್ನು ಸಮೂಲ ನಷ್ಟ ಮಾಡಿ ಕಾಯಂ ಗುಣಪಡಿಸುತ್ತದೆ. ಅನುಪಾನ ಪತ್ರಿಕೆ ಔಷಧದ ಕೂಡ ಪಥ್ಯ ಏನೂ ಇಲ್ಲ. ಬೆಲೆ ರೂ. ೫-೦-೦ ಅಂಚೆ ವೆಚ್ಚ ಬೇರೆ.

## ಕಿಂ ] ವನಿತಾ ಕಲ್ಯಾಣ ಪ್ರದರಾಂತಕ [ ೫-೮-೦

ಶ್ವೇತ:-ರಕ್ತ ಪ್ರದರ, ಮುಟ್ಟು ಹೆಚ್ಚು ಕಡಿಮೆ ಅನಿಯಮಿತ ಮುಟ್ಟಾಗುವಿಕೆ, ಮುಟ್ಟಾಗುವ ಕಾಲಕ್ಕೆ ರಕ್ತಸ್ರಾವ ಆಗದೆ ಗುಲಾಬಿ, ಹಳದಿ, ಕೆಂಪು ಮುಂತಾದ ಅಶುದ್ಧ ದುರ್ಗಂಧಯುಕ್ತ ಮುಟ್ಟು ನೀರಿನಂತೆ ಹೋಗುವಿಕೆ ಇವೆಲ್ಲವುಗಳನ್ನು ಖಂಡಿತವಾಗಿ ನಷ್ಟಪಡಿಸುತ್ತದೆ. ಇದರ ಸೇವನೆಯಿಂದ ಪ್ರದರ ಮತ್ತು ಮುಟ್ಟುದೋಷ ಇವುಗಳಿಂದ ಕೆಪ್ಪಟ್ಟ ಗರ್ಭಾಶಯ ಇಲ್ಲವೆ ಕುಸುಮದಲ್ಲಿ ಆಗುವ ವೇದನೆ, ನಡ, ತಲೆ, ತೊಡೆ ಮತ್ತು ಸಂದು ಇವುಗಳ ನೋವು, ಸಂಭೋಗ ಸಮಯದಲ್ಲಿ ಕಷ್ಟ, ಗರ್ಭಧಾರಣೆ ಆಗದಿರುವಿಕೆ, ಆದರೂ ಗರ್ಭಪಾತ ಮುಂತಾದ ಎಲ್ಲ ವಿಕಾರ ಮತ್ತು ಆದರಿಂದ ಉತ್ಪನ್ನವಾದ ಎಲ್ಲ ರೋಗಗಳನ್ನು ನಾಶ ಮಾಡಿ ಶರೀರದಲ್ಲಿ ಬಲ ಪುಷ್ಟಿ ಮತ್ತು ಗರ್ಭಾಶಯದಲ್ಲಿ ಗರ್ಭಧಾರಣೆಯ ಶಕ್ತಿಯುಂಟಾಗುತ್ತದೆ. ಈ ಔಷಧ ಸೇವನೆಯಿಂದ ಸಾವಿರಾರು ಸ್ತ್ರೀ-ಪುರುಷರು ಗುಣಹೊಂದಿದ್ದಾರೆ. ಪಥ್ಯ ಏನೂ ಇಲ್ಲ. ಅಂಚೆ ವೆಚ್ಚ ಬೇರೆ.

**ವಿಳಾಸ—ವೈದ್ಯರಾಜ ವಿ. ಬಿ. ಶಿದನಾಳ**

೧೩೮೯ (ಕೆ. ವ್ಹಿ.) ಬಸವನಗಲ್ಲಿ, ಬೆಳಗಾವಿ.


ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ, ಪ್ರಕಟವಾಯಿತು